ವೀರಶೈವಗ್ರಂಥಪ್ರಕಾಶಿಕಾ ಗ್ರಂಥಾವಳಿಯ ನಂ. ೧೨.

ಬೊಮ್ಮರಸ ಕವಿವರ್ಯ ವಿರಚಿತ

ಶ್ರೀ

# ರೇವಣಸಿದ್ಧೇಶ್ವರ ಪುರಾಣಂ

ಆಸ್ಥಾನವಿದ್ವಾನ್

ವೇ|| ಎಸ್. ಆರ್. ಕರಿಬಸವಶಾಸ್ತ್ರಿಗಳಿಂದ

ಪರಿಷ್ಕೃತವಾಗಿ

...ಗ್ರಂಥಪ್ರಸಾರಕ ಮಂಡಲಿಯಿಂದ

ಪ್ರಕಟಿಸಲ್ಪಟ್ಟಿದೆ.







ಮೈಸೂರು

...ಕನ್ಯಕಾಪರಮೇಶ್ವರೀ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು

1926.

ವೀರಶೈವಗ್ರಂಥಪ್ರಕಾಶಿಕಾ ಗ್ರಂಥಾವಳಿಯ ನಂ. ೧೦.

ಬೊಮ್ಮರಸ ಕವಿವರ್ಯ ವಿರಚಿತ

ಶ್ರೀ

# ರೇವಣಸಿದ್ಧೇಶ್ವರಪುರಾಣಂ

ಆಸ್ಥಾನವಿದ್ವಾನ್

ವೇ|| ಎಚ್. ಆರ್. ಕರಿಬಸವಶಾಸ್ತ್ರಿಗಳಿಂದ

ಪರಿಷ್ಕೃತವಾಗಿ

ಗ್ರಂಥಪ್ರಸಾರಕ ಮಂಡಲಿಯಿಂದ

ಪ್ರಕಟಿಸಲ್ಪಟ್ಟಿದೆ.

ದ್ವಿತೀಯಮುದ್ರಣ.

1926.

ಮೈಸೂರು

ಶ್ರೀಮತ್ಕನ್ಯಕಾಪರಮೇಶ್ವರೀ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು

# ಪ್ರಸ್ತಾವನೆ.

ವೇದಾಗಮೋಪನಿಷತ್ತುಗಳಲ್ಲಿ ಪ್ರತಿಪಾದಿತವಾದ ವೀರಶೈವ ಸಿದ್ಧಾಂತವನ್ನು ಶಿವಾಜ್ಞೆಯ ಮೇರೆ ಭೂಮಿಯಲ್ಲಿ ಪ್ರಸಾರಮಾಡುವುದಕ್ಕಾಗಿ ಅಪ್ರಾಕೃತಶರೀರಿಯಾಗಿ ಲಿಂಗಮುಖದಿಂದ ಅವತರಿಸಿದ್ದ ರೇಣುಕ ಪ್ರಮಥವರ್ಯರ ಚರಿತ್ರವು ಈ ಗ್ರಂಥದಲ್ಲಿ ನಿರೂಪಿತವಾಗಿದೆ. ಈ ರೇವಣಸಿದ್ಧರು ಗುಪ್ತವಾಗಿ ೭೦೦ ವರ್ಷಗಳೂ, ಪ್ರಕಾಶವಾಗಿ ೭೦೦ ವರ್ಷಗಳೂ, ಭೂಮಿಯಲ್ಲಿ ನೆಲಸಿದ್ದರಿಂದಲೂ, ಸಿದ್ಧರೊಳಗೆಲ್ಲ ಅಗ್ರೇಸರರಾಗಿದ್ದುದರಿಂದಲೂ, ಅಗಸ್ತ್ಯಾದಿ ಮಹರ್ಷಿಗಳಿಗೆ ಷಟ್‌ಸ್ಥಲ ತತ್ವೋಪದೇಶವನ್ನು ಮಾಡಿದ ಘನತೆಯುಳ್ಳವರಾಗಿದ್ದುದರಿಂದಲೂ ಪರಶಿವನ ಅಪರಾವತಾರರೆನಿಸಿದ್ದ ಈ ಜಗದ್ಗುರು ರೇಣುಕಾಚಾರ್ಯರು ಭೂತಲದಲ್ಲಿ ನಡೆಯಿಸಿದ ಮಹಿಮೆಗಳು ಅನಂತವಾಗಿರಬೇಕು. ಆದರೆ ಐತಿಹಾಸಿಕ ವಿಷಯಸಂಗ್ರಹ ವಿಷಯದಲ್ಲಿ ಭಾರತೀಯ ಸಾಮಾನ್ಯಕ್ಕೂ ಇರುವ ಕೊರತೆಯೇ ಇವರ ಚರಿತ್ರಸಂಗ್ರಹ ವಿಷಯದಲ್ಲಿಯೂ ಇರುತ್ತಿದ್ದುದರಿಂದ ಈ ರೇವಣಸಿದ್ಧೇಶ್ವರರ ಚರಿತ್ರವನ್ನು ನಿರೂಪಿಸುವ ಗ್ರಂಥಗಳಾವುವೂ ಸಮಗ್ರಗಳೆನಿಸಿಕೊಳ್ಳುವಂತಿರುವುದಿಲ್ಲ. ಈ ರೇವಣಸಿದ್ಧೇಶ್ವರ ಚರಿತ್ರವು ಸಂಸ್ಕೃತದಲ್ಲಿ ಈಶಾನ್ಯ ಶಿವಗುರುಗಳಿಂದಲೂ, ಕನ್ನಡದಲ್ಲಿ ರಘಟಾಕಾರವಾಗಿ ಹಂಪೆಯ ಹರೀಶ್ವರದೇವರಿಂದಲೂ ಹೇಳಲ್ಪಟ್ಟಿರುವುದಲ್ಲದೆ, ರೇವಣಸಾಂಗತ್ಯವೆಂಬ ಗ್ರಂಥದಲ್ಲಿಯೂ, ಚತುರಾಚಾರ್ಯ ಪುರಾಣದಲ್ಲಿಯೂ ಷಟ್ಪದಿಯರೂಪವಾದ ಈ ಗ್ರಂಥದಲ್ಲಿಯೂ ನಿರೂಪಿಸಲ್ಪಟ್ಟಿರುವುದು.

ಈ ಗ್ರಂಥಕರ್ತರು ಗ್ರಂಥದ ಆದಿಭಾಗದಲ್ಲಿ ಈ ತಮ್ಮ ರಚನೆಗೆ ಈಶಾನಶಿವಗುರುಗಳ ಸಂಸ್ಕೃತಭಾಷಾಗ್ರಂಥವೂ, ಹಂಪೆಯ ಹರೀಶ್ವರರ ರಗಳೆಯೂ ಆಧಾರವಾಗಿದ್ದುವೆಂದು ಹೇಳಿಕೊಂಡಿರುವರು. ಆ ಸಂಸ್ಕೃತ ಗ್ರಂಥವು ನಮಗೆ ದೊರೆದಿರುವುದಿಲ್ಲ. ಅದು ಸಿಕ್ಕಿದ್ದರೆ ಅವರು ಯಾವುದರ ಆಧಾರದ ಮೇಲೆ ಆ ರೇಣುಕಾಚಾರ್ಯನ ಚರಿತ್ರವನ್ನು ಲಿಖಿಸಿದರೆಂಬುದನ್ನು ಅರಿಯಬಹುದಾಗಿದ್ದಿತು.

ಈ ರೇವಣಸಿದ್ಧೇಶ್ವರ ಪುರಾಣದಲ್ಲಾದರೂ ಮುಖ್ಯವಾದ ವಿಷಯಗಳ ವಿವರಣಭಾಗವು ಕಡಿಮೆಯಾಗಿಯೂ, ಶೃಂಗಾರಾದಿ ವರ್ಣನ ಭಾಗಗಳು ವಿಶೇಷವಾಗಿಯೂ ಇವೆ. ರೇವಣಸಿದ್ಧೇಶನು ಚೋಳಮಂಡಲದಲ್ಲಿ ಪರಸಮಯದವರೊಡನೆ

ವಾದವನ್ನು ನಡೆಯಿಸಿ, ಶಿವಸಿದ್ಧಾಂತಸ್ಥಾಪನೆಮಾಡಿದ ವಿಷಯವನ್ನೇ ಹಿಡಿದು, "ಹೋಳರೇಣುಕಸಂವಾದ" ವೆಂಬ ಒಂದು ಸ್ವತಂತ್ರ ಗ್ರಂಥವೇ ರಚಿತವಾಗಿರುವಾಗ, ಈ ಪುರಾಣದೊಳಗೆ ಆ ವಾದದ ವಿಷಯವೇ ಎತ್ತಲ್ಪಟ್ಟಿಲ್ಲ. ವೇದಾಗಮಾದಿಸಿದ್ಧವಾದ ಒಂದು ಪ್ರಬಲಮತದ ಆಚಾರ್ಯರಾಗಿದ್ದವರ ಚರಿತ್ರವು ಎಷ್ಟು ಘನತರವಾಗಿರಬೇಕೋ ಅಂಥ ರೀತಿಯಲ್ಲಿ ಈಗಿನ ಯಾವ ರೇಣುಕಚರಿತ್ರವೂ ಇಲ್ಲದಿರುವುದು ವಿಷಾದಾಸ್ಪದವಾಗಿದೆ. ಆಸ್ಥಾನಕವಿ ಕೈ|| ಬಸವಪ್ಪಶಾಸ್ತ್ರಿಗಳು ಈ ಲೋಪವನ್ನರಿತು "ರೇಣುಕವಿಜಯ" ವೆಂಬ ಹೆಸರಿನಿಂದ ವಸ್ತುಕರೂಪವಾಗಿ ಪ್ರೌಢವಾದ ಗ್ರಂಥವೊಂದನ್ನು ಘನತರವಾಗಿ ರಚಿಸಲು ಆರಂಭಿಸಿ ೧-೨ ಆಶ್ವಾಸಗಳನ್ನು ಮುಗಿಯಿಸಿದ್ದರು. ಅಷ್ಟರಲ್ಲಿ ಅವರು ಶಿವೈಕ್ಯರಾದುದರಿಂದ ಅದೂ ಹಾಗೆಯೇ ನಿಂತಿತು. ಶಿವಾನುಗ್ರಹದಿಂದ ಅವರಂತಹ ವರಕವಿಗಳಾರಾದರೂ ತಲೆದೋರಿ ಆ ಕಾರ್ಯವನ್ನು ಸಾಂಗಗೊಳಿಸಬೇಕಾಗಿರುವುದು.

ಈಗಿರುವ ರೇಣುಕ ಚರಿತ್ರೆಗಳಲ್ಲಿ ಈ ಗ್ರಂಥನೇ ಸ್ವಲ್ಪ ವಿಸ್ತೃತವಾಗಿರುವುದರಿಂದ ಇದನ್ನು ನಾವು ಮುದ್ರಿಸಲು ಯೋಚಿಸಿದೆವು. ಈಗ ೩೦ ವರ್ಷಗಳ ಕೆಳಗೆ ಮದ್ರಾಸಿನ ಪ್ರಾಚೀನ ಗ್ರಂಥಭಂಡಾಗಾರದಲ್ಲಿ ಅತ್ಯಂತ ಶಿಥಿಲವಾಗಿದ್ದ ತಾಳಪ್ರತಿಯಮೇಲಿಂದ ಎತ್ತಿದ ಈ ಪುರಾಣದ ಒಂದು ಪ್ರತಿಯು ನಮ್ಮಲ್ಲಿದ್ದಿತು. ಈಚೆಗೆ ಚಿಕ್ಕಮಗಳೂರು ತಾ|| ಮೆಣಸಿನ ಮಲ್ಲೇದೇವರಹಳ್ಳಿಯ ಶ್ರೀಕಲ್ಲಿನಾಥ ಸ್ವಾಮಿಗಳು ಮತ್ತೊಂದು ತಾಳಪ್ರತಿಯನ್ನು ಕಳುಹಿಸಿ ಕೊಟ್ಟರು. ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರೆರಿಯಲ್ಲಿದ್ದ ಮತ್ತೊಂದು ಪ್ರತಿಯೂ ಒದಗಿತು. ಇವೆಲ್ಲ ಪ್ರತಿಗಳಲ್ಲೂ ಲೇಖಕರ ದೋಷದಿಂದ ಪದ ಪಾದ ಲೋಪಾದಿ ದೋಷಗಳೂ ವಿವಿಧವಾದ ಪಾಠಾಂತರಗಳೂ ಅನೇಕವಾಗಿದ್ದುವು. ಎಲ್ಲ ಪ್ರತಿಗಳನ್ನೂ ಇಟ್ಟುಕೊಂಡು ಸಾಧ್ಯವಾದ ಮಟ್ಟಿಗೂ ಚೆನ್ನಾಗಿ ಪರಿಷ್ಕರಿಸಿ ಮುದ್ರಣಕ್ಕೆ ಸಿದ್ಧಮಾಡಿರುವಷ್ಟರಲ್ಲಿ, ಇದಕ್ಕೆ ಮುಂಚೆಯೇ ಈ ಗ್ರಂಥವು ಅಚ್ಚಾಗಿರುವುದೆಂಬ ಸುದ್ದಿಯು ಗೊತ್ತಾಗಲು, ಅದನ್ನು ತರಿಸಿ ನೋಡುವಲ್ಲಿ ನಮ್ಮ ಈ ಪ್ರಯತ್ನವು ವಿರಮಿಸಲ್ಪಡತಕ್ಕದಾಗಿ ತೋರಲಿಲ್ಲ. ಆದಕಾಣ, ಇದನ್ನು ವೀರಶೈವಗ್ರಂಥಪ್ರಕಾಶಿಕೆಯೆಂಬ ಮಾಸ ಪತ್ರದಲ್ಲಿ ಮುದ್ರಿಸಿ ಮುಗಿಸಿದೆವು. ಇದರ ಮುದ್ರಣಕ್ಕೆ ಪ್ರತ್ಯಂತರಗಳನ್ನು ಸಹಾಯಮಾಡಿದ ಮಹನೀಯರಿಗೆ ನಾವು ಕೃತಜ್ಞರಾಗಿರುವೆವು.

ವಿಭೀಷಣನೂ ಉಜ್ಜಯಿನಿಯ ವಿಕ್ರಮರಾಜನೂ ಇದ್ದ ಕಾಲದಲ್ಲಿ ರೇವಣಸಿದ್ಧರು ಭೂಲೋಕದಲ್ಲಿದ್ದರೆಂದು ಇವರ ಚರಿತ್ರದಿಂದ ಗೊತ್ತಾಗುತ್ತದೆ. ವಿಕ್ರಮ

ಶಕೆಯು ಆರಂಭಿಸಿ ಇಲ್ಲಿಗೆ ಸ್ವಲ್ಪ ಹೆಚ್ಚುಕಡಿಮೆ ೨ ಸಹಸ್ರ ವರ್ಷಗಳಾಗಿವೆ. ವಿಭೀಷಣನು ಚಿರಜೀವಿಯು. ಆದುಕಾರಣ ಈಗ್ಗೆ ೪ ಸಹಸ್ರ ವರ್ಷಗಳಿಂದೀಚೆಗೂ ೨ ಸಹಸ್ರ ವರ್ಷಗಳ ಆಚೆಗೂ ಮಧ್ಯದ ಕಾಲದಲ್ಲಿ ರೇವಣಸಿದ್ಧರು ಭೂಲೋಕದಲ್ಲಿ ವಾಸಿಸಿದ್ದರೆಂದು ಊಹಿಸಬಹುದಾಗಿದೆ.

ಈ ಪುರಾಣವನ್ನು ರಚಿಸಿದ ಬೊಮ್ಮರಸ ಕವಿಯು ಬಹುಶಃ ೩೦೦ ವರ್ಷಗಳ ಹಿಂದೆ ಇದ್ದಿರಬಹುದು. ಸೌಂದರಪುರಾಣವನ್ನು ರಚಿಸಿರುವ ಬೊಮ್ಮರಸನೂ ಈ ಗ್ರಂಥವನ್ನು ರಚಿಸಿರುವ ಬೊಮ್ಮರಸನೂ ಬೇರೆಬೇರೆಯಾಗಿರಬೇಕೆಂದು ತೋರುತ್ತದೆ. ಏಕೆಂದರೆ:—ಕವಿತೆಯಲ್ಲಿ ಇವೆರಡು ಗ್ರಂಥಗಳಿಗೂ ತಾರತಮ್ಯವಿದೆ. ಮತ್ತು ಸೌಂದರಪುರಾಣದ ಬೊಮ್ಮರಸನು ಚೊಕ್ಕದೇವಪಾರ್ಯನನ್ನು ತನ್ನ ಗುರುವನ್ನಾಗಿಯೂ, ಆತನ ಕುಮಾರನ ಆಜ್ಞೆಯಿಂದಲೂ ತಿಪ್ಪಭೂಪಾಲನ ಪ್ರೋತ್ಸಾಹದಿಂದಲೂ ಆ ಗ್ರಂಥವನ್ನು ತಾನು ರಚಿಸಿದಂತೆಯೂ ಹೇಳಿಕೊಂಡಿರುವನು. ಪ್ರತಿ ಸಂಧಿಯನ್ನೂ ನೀಲಕಂಠಪದಾಂಕಿತವನ್ನಾಗಿ ಮುಗಿಸಿರುವನು. ಈ ಗ್ರಂಥಕರ್ತೃವಾದ ಬೊಮ್ಮರಸನಾದರೋ— ತಾನು ಮಾಯಣನ ಪುತ್ರನೆಂದೂ, ಬಾಲಸಿದ್ಧೇಶನು ತನ್ನ ಗುರುವೆಂದೂ ಹೇಳಿಕೊಂಡಿರುವುದಲ್ಲದೆ ಪ್ರತಿಯೊಂದು ಸಂಧಿಯ ಕೊನೆಯನ್ನೂ ಶಾಂತಮಲ್ಲೇಶಲಿಂಗಪದಾಂಕಿತವನ್ನಾಗಿ ಮಾಡಿರುವನು. ಮತ್ತು ಈ ಬೊಮ್ಮರಸನಿಗೆ “ವರ್ಣಕಕವೀಂದ್ರಚತುರಾಸ್ಯ-ಕವಿಸಭಾಮಾಣಿಕ್ಯದೀಪ ಕವಿಬ್ರಹ್ಮ” ಎಂಬ ಬಿರುದುಗಳಿದ್ದುವೆಂದು ಈ ಗ್ರಂಥದ ಕೊನೆಯ ಸಂಧಿಯ ೩೮–೩೯ನೆ ಪದ್ಯಗಳಿಂದ ಗೊತ್ತಾಗುವುದು. ಈ ವ್ಯತ್ಯಾಸಗಳಿಂದ ಬೊಮ್ಮರಸನೆಂಬ ಹೆಸರಿನ ಕವಿಗಳು ಇಬ್ಬರಿದ್ದರೆಂದು ಊಹಿಸಲವಕಾಶವಿದೆ. ಈ ಬೊಮ್ಮರಸನು ಕಾಶ್ಯಪಗೋತ್ರದ ಶೈವಮತಬ್ರಾಹ್ಮಣನಾಗಿದ್ದು ವೀರಶೈವಮತಪ್ರವಿಷ್ಟನಾದವನೆಂದು ಗೊತ್ತಾಗುವುದು.

ಈಗ್ರಂಥದಲ್ಲಿನ ಕವಿತೆಯು ಹೆಚ್ಚಾಗಿ ಹಳೆಗನ್ನಡಗಳಿಂದ ಕೂಡಿ ಲಲಿತವಾಗಿ ಉತ್ತಮವಾದ ಶಯ್ಯೆಯುಳ್ಳದಾಗಿದೆ. ಆದರೂ ಸರಿಮಾಡಲಾಗದ ವ್ಯಾಕರಣ ವಿರುದ್ಧಪ್ರಯೋಗಗಳು ಅಲ್ಲಲ್ಲಿಗೆ ಕಾಣುಬರುತ್ತಿವೆ.

ಆಸ್ಥಾನವಿದ್ವಾನ್

ತಾ|| 5-3-26.
ಮೈಸೂರು.

ಎನ್. ಆರ್. ಕರಿಬಸವಶಾಸ್ತ್ರಿ,
ಪ್ರಕಾಶಕ.



# ವಿಷಯಸೂಚಿಕೆ.


| ವಿಷಯಗಳು. | ಪುಟಸಂಖ್ಯೆ. |
|---|---|
| ಮಂಗಳಾಚರಣವು ... ... ... ... | ೧ |
| ಗ್ರಂಥಕರ್ತೃ ವಿಷಯವು ... ... ... | ೮ |
| ಕೈಲಾಸವರ್ಣನವು ... ... ... ... | ೧೧ |
| ಶಿವಸಭಾವರ್ಣನವು ... ... ... ... | ೧೫ |
| ಶಿವನು ರೇಣುಕಪ್ರಮಥನನ್ನು ಭೂಲೋಕಕ್ಕೆ ಕಳುಹುವುದು ... | ೨೦ |
| ತ್ರಿಲಿಂಗದೇಶ ವರ್ಣನವು ... ... ... | ೨೨ |
| ಕೊಲ್ಲಿಪಾಕಿಪುರ ವರ್ಣನವು ... ... ... | ೨೫ |
| ಸೋಮನಾಥ ದೇವಾಲಯ ವೈಭವವರ್ಣನವು ... ... | ೨೬ |
| ಸೋಮನಾಥಲಿಂಗದಿಂ ರೇವಣಸಿದ್ಧಾವತಾರವು ... ... | ೩೩ |
| ಮಲಯಾಚಲ ವರ್ಣನವು ... ... ... | ೩೫ |
| ಅಗಸ್ತ್ಯಾಶ್ರಮ ವರ್ಣನವು ... ... ... | ೩೮ |
| ರೇಣುಕಾಗಸ್ತ್ಯ ಸಂಭಾಷಣವು ... ... ... | ೪೧ |
| ವೀರಶೈವಸಿದ್ಧಾಂತೋಪದೇಶವು ... ... ... | ೪೨ |
| ರೇವಣೇಶಚೋಳದೇಶಾಟನವು ... ... ... | ೪೪ |
| ರೇವಣೇಶಕಾಂಚೀಪುರವಾಸವು ... ... ... | ೪೮ |
| ವಿಜಯೇಂದ್ರಚೋಳನಪ್ರಾರ್ಥನೆಯಂತೆ ವಿಷ್ಣುವಿಗ್ರಹದ ಅಲ್ಲಾಟಮಂನಿಲ್ಲಿಸಿದುದು | ೫೩ |
| ಮಾಸನೂರಿನಲ್ಲಿ ವಾಸವು ... ... ... | ೫೪ |
| ತಗುಣೆಗಳ ರೂಪಿನ ರಾಕ್ಷಸರ ದಹನವು ... ... | ೫೫ |
| ಉಜ್ಜಯಿನೀಪುರಕ್ಕೆ ಬಂದು ವಿಕ್ರಮನನ್ನು ಅನುಗ್ರಹಿಸಿದುದು ... | ೫೬ |
| ಮಂಗಳವಾಡಪುರ ವರ್ಣನವು ... ... ... | ೫೭ |
| ರೇವಣೇಶ್ವರನು ಗಾಣದ ಕಲ್ಲಿಸೆಟ್ಟಿಗೆ ಅನುಗ್ರಹಿಸಿದುದು ... | ೫೮ |
| ಸೂಳೆಮಾಯಿದೇವಿಯ ಮನೆಯ ವಾಸವು ... ... | ೬೦ |
| ವಿಭೀಷಣನಿಗೆ ರೇವಣಸಿದ್ಧ ಸಂದರ್ಶನವು ... ... | ೬೮ |
| ವಿಭೀಷಣಪ್ರಾರ್ಥನೆಯಂತೆ ಲಂಕೆಯಲ್ಲಿ ಕೋಟಿತ್ರಯಶಿವಲಿಂಗಪ್ರತಿಷ್ಠಾಪನೆಯು | ೬೯ |

ಶೃಂಗಗಿರಿಯಲ್ಲಿ ಋಷ್ಯಶೃಂಗಾನುಗ್ರಹವು ... ... ೭೦
ಪುಣ್ಯತೀರ್ಥಕ್ಷೇತ್ರಾದಿಸಂಚಾರವು ... ... ... ೭೨
ಮಂಗಳವಾಡದಲ್ಲಿ ವೀರಬಿಜ್ಜಳನಿಗೆ ಮಹತ್ತ್ವ ಪ್ರದರ್ಶನವು ... ೭೩
ಕೊಲ್ಲಾಪುರದಲ್ಲಿ ಕುಟಿಲಸಿದ್ಧರನ್ನು ಭಂಗಿಸಿದುದು ... ... ೭೪
ಗೋರಕ್ಷಂಗೆ ಶಿವಧರ್ಮೋಪದೇಶವು ... ... ... ೭೬
ಶ್ರೀಶೈಲವಾಸವು ... ... ... ... ೭೮
ಮಂಗಳವಾಡದಲ್ಲಿ ಕಪಟಸಿದ್ಧರನ್ನು ಭಂಗಿಸಿ ಕನ್ಯಾಬಂಧನವಂ ಬಿಡಿಸಿ
ವೀರಬಿಜ್ಜಳನ ಮಗಳಂ ಮದುವೆಯಾಗಿ ಆತನನ್ನು ಅನುಗ್ರಹಿಸಿದುದು ೮೨
ರಾಜೇಂದ್ರಚೋಳನ ಮಗಳನ್ನು ಮದುವೆಯಾದುದು, ರುದ್ರಮುನೀಶ್ವರ ಜನನ ೧೦೦
ರುದ್ರಮುನೀಶನಿಗೆ ದೀಕ್ಷಾಸಂಸ್ಕಾರ, ಮತ್ತೂ ಪಟ್ಟಬಂಧನ ... ೧೦೩
ಹಾವಿನಹಾಳ ಕಲ್ಲಯ್ಯನಿಗೆ ರುದ್ರಮುನೀಶನಿಂದ ಶಿವದೀಕ್ಷೆಯನ್ನು
ಮಾಡಿಸಿದುದು ... ... ... ೧೧೦
ಸೃಷ್ಟಿಕ್ರಮನಿರೂಪಣವು ... ... ... ೧೧೨
ಗುರುವರನು ಸೊನ್ನಲಾಪುರಕ್ಕೆಬಂದು ಚಾಮಲದೇವಿಯನ್ನನುಗ್ರಹಿಸಿದುದು ೧೧೫
ಸಿದ್ಧರಾಮಶಿವಯೋಗಿಯ ಅವತಾರ ನಿರೂಪಣವು ... ೧೧೮
ಶ್ರೀಶೈಲಕ್ಕೆ ದಯಮಾಡಿದುದು ... ... ... ೧೧೯
ವಸಂತಾದಿ ಋತುವರ್ಣನೆ ... ... ... ೧೨೨
ರೇವಣೇಶನು ಪತ್ನಿಯರನ್ನು ಕೈಲಾಸಕ್ಕೆ ಕಳುಹುವುದು ... ೧೨೪
ಕಾಶಿಯಲ್ಲಿ ಗಂಗಾವತರಣ ಕಾರಣವನ್ನು ನಿರೂಪಿಸುವುದು ... ೧೨೫
ಹಿಮವತ್ಪರ್ವತದಲ್ಲಿ ಋಷಿಗಳ ಸತ್ಕಾರವಂ ಸ್ವೀಕರಿಸಿ ಅನುಗ್ರಹಿಸುವುದು ೧೨೬
ಕೊಲ್ಲಿಪಾಕಿಗೆ ರೇವಣಸಿದ್ಧೇಶನ ಆಗಮನವು ಮತ್ತು ಶಿವಲಿಂಗೈಕ್ಯವು ೧೨೮





ಓಂ

ಶ್ರೀ ಶಿವಾಯ ಪರಬ್ರಹ್ಮಣೇನಮಃ.

# ರೇವಣಸಿದ್ಧೇಶ್ವರಪುರಾಣಂ.



( ವಾರ್ಧಕ ಷಟ್ಪದಿ. )

---

ಶ್ರೀಮದಮೃತಾಂಶುಲೇಖಾಮರುದ್ಗಂಗಾಭಿ |
ರಾಮಪಿಂಗಲಜಟಾಘನಮಕುಟ ಸಾಮಸು |
ಪ್ರೇಮ ಕಾತ್ಯಾಯನೀವಾಮಾಂಗ ಕರುಣಾತರಂಗಪರಿಲಸದಪಾಂಗಾ ||
ಶ್ಯಾಮಗಳ ಕಾಮಹರ ಭೀಮ ಸುತ್ರಾಮಮು |
ಖ್ಯಾಮರಸ್ತೋಮನತ ಹೇಮಗಿರಿಮಂದಿರ ಪಿ |
ತಾಮಹಾರ್ಚಿತ ಶಾಂತಮಲ್ಲಿಕಾರ್ಜುನ ಜಯ ಮಹಾಮಹಿಮ ಮಂಗಳಕರಾ ||೧||

ಯಕ್ಷೇಂದ್ರವರದ ದುರಿತಕ್ಷಯ ಮಹೇಶ ನಿಜ |
ಕುಕ್ಷಿನಿಕ್ಷಿಪ್ತಶತಲಕ್ಷ ಪದ್ಮಭವಾಂಡ |
ದಾಕ್ಷಾಯಣೀಕಟಾಕ್ಷೇಕ್ಷಣಾಲೋಲ ಪಂಚಾಕ್ಷರೀಮಂತ್ರರೂಪಾ ||
ಉಕ್ಷಕೇತನ ವಿರೂಪಾಕ್ಷ ನಿರಪೇಕ್ಷ ನಿ |
ರ್ಲಕ್ಷ ನಿರ್ಲಯ ನಿರಂಜನ ಸದಾಶಿವ ಸರೋ |
ಜಾಕ್ಷನುತ ಜಯ ಶಾಂತಮಲ್ಲಿಕಾರ್ಜುನ ಸನ್ಮುಮುಕ್ಷುಜನವಿಪುಲಪಕ್ಷಾ ||೨||

ಹಿಮವನ್ಮಹೀಧರಾಧಿಪನ ಸುಕುಮಾರಿಯನು |
ಯಮಿಹೃದಾವಾಸದೀಪಾಂಕುರಾಕಾರಿಯನು |
ಕಮನೀಯಮರಕತಶ್ಯಾಮಲಲಿತಾಂಗಿಯನು ಶ್ರುತಿವಿಪಿನಸಾರಂಗಿಯ ||
ಉಮೆಯ ಶಕ್ತಿಗಳೊಳುತ್ತಮೆಯ ಪರಿಹೃತಭವ |
ಭ್ರಮೆಯ ಸೇವಿತವಚೋರಮೆಯ ನತಿಭಕ್ತಿಯಿಂ |
ಭ್ರಮರಾಂಬಿಕೆಯ ಶಶ್ವದಮರಾಭಿನಮಿತಪದಕಮಲೆಯನು ಕೀರ್ತಿಸುವೆನು ||೩||

ಶ್ರೀಶನನು ಕಾಂಚಿಯೊಳು ನುಡಿಸಿ ಚೋಳಂಗೆ ಕ |
ನ್ಯಾಸಮೂಹದ ಬಂಧನವ ಬಿಡಿಸಿ ಬಿಜ್ಜಳಮ |
ಹೀಶನಿಂ ಪೂಜೆಗೊಂಡಾದಿಶೈವಾಚಾರ್ಯನಾಗಿ ಲಂಕಾಪುರದೊಳು ||
ಈಶತ್ರಿಕೋಟಿಯಂ ಹದಿಟಿಗೆಯ್ದಿಲವಿಂ ವಿ |
ಭೀಷಣನ ಪಾಲಿಸಿದ ವೀರಶೈವಪ್ರಥಮ |
ದೇಶಿಕಂ ರೇವಣಾಸಿದ್ಧೇಶ ನೆಮಗೀಗೆ ಭಾಸುರಸದಾನಂದಮಂ ||೪||

ಹರುಷದಿಂದಂ ನೋಳ್ಪ ಬುಂಜಿಪಾಘ್ರಾಣಿಸುವ |
ಪರುಸನಂಗೈವ ಕೇಳುವ ಪರಮಸುಖವ ನೋ |
ಸರಿಸದರ್ಶಿಸುವ ಲಿಂಗಾಂಗದ ಬೆಡಂಗಿಂತಿದೆಂದು ಶಿಷ್ಯಪ್ರತತಿಗೆ ||
ಕರತಳಾಮಳಕಂ ಮಾಡಿದ ಸಮುನ್ನತಂ |
ಕುರುಣಿಸುಗೆ ಸಂತತಂ ಮರಳುಸಿದ್ಧೇಶಸ |
ದ್ಗುರು ಶಿವಾದ್ವೈತಕ್ಕೆ ಕಟು ಭವಮಹೀಧರಸ್ಪರು ವೆಮಗಭೀಷ್ಟಫಲಮಂ ||೫||

ಸಕಲನಿಷ್ಕಲಮೆನಿಪ್ಪುಭಯಮಂ ನಿಜವಚೋ |
ಮುಕುರದೊಳ್ ಕಾಣಿಸಿ ಸಮಂತವರಯೋಗಮಂ |
ಪ್ರಕಟಿಸಿ ವಿರಕ್ತಿಯಂ ಭಕ್ತಿಯಂ ಮುಕ್ತಿಯಂ ವ್ಯಕ್ತಮಾಗಿರ ಲಿಳೆಯೊಳು ||
ಸುಕರಮಪ್ಪಂತೆ ಮಾಡಿದ ವಿತತನಿರ್ಮಳಾ |
ತ್ಮಕನು ಯೋಗೀಂದ್ರ ನೇಕೋರಾಮನಾಥದೇ |
ಶಿಕನು ಶಿವಧರ್ಮರಕ್ಷಕನು ಪರತತ್ವಬೋಧಕನು ಪಾಲಿಸುಗೆಮ್ಮನು ||೬||

ಧಾರಿಣಿಯೊ ಳರುವತ್ತುನಾಲ್ಕುಶೀಲಂಗಳಂ |
ಪೂರೈಸಿ ತೋರಿ ಯಂತೇವಾಸಿಗಳ್ಗೆ ಸಂ |
ಸಾರಪಾಶಚ್ಛೇದಮಂ ಮಾಡಿ ಕೈವಲ್ಯಸೌಖ್ಯಮಂ ಕೈಸೇರಿಸಿ ||
ವೀರಶೈವಾಚಾರಮಂ ಸುಪ್ರತಿಷ್ಠಿಸಿದ |
ಸಾರಮಹಿಮ ರ್ಪೊರೆಗೆ ಮಲ್ಲಿಕಾರ್ಜುನಪಂಡಿ |
ತಾರಾಧ್ಯ ರಖಿಲತರ್ಕಂಗಳಿಗಸಾಧ್ಯರನುಗತಸುಜನಹೃನ್ಮಧ್ಯರು ||೭||

ಮುನ್ನ ವೋಂಕಾರಸಹಿತನಮಶ್ಶಿವಾಯಸಿ |
ದ್ಧನ್ನಾಮವೆನಿಪ ಮಂತ್ರಪನೋದಿ ಬರೆದ ಫಲ |
ದಿನ್ನಖಿಲಜನಕೆ ಸಾರಸ್ವತಂ ಸಂಭವಿಪುದಂತೆಗೆಡ ನಿಮ್ಮಂಘ್ರಿಯ ||

ನನ್ನಿವಿಡಿ ದೇಕಚಿತ್ತದಿ ಭಜಿಸುತಿರ್ಪ್ಪವಂ |
ಗಿನ್ನೇನುವಾಕ್ಸಿದ್ಧಿ ಯಪ್ಪುದೋ ಬಣ್ಣಿಸುವೊ |
ಡೆನ್ನಳವೆ ನಿಮ್ಮ ಮಹಿಮೆಯ ರೇವಣಾಸಿದ್ಧಯೋಗೀಂದ್ರ ವಿಹತತಂದ್ರ ||೮||

ಶಿವಸಿದ್ಧಕುಲಚಕ್ರವರ್ತ್ತಿ ನಿರ್ಮ್ಮಳಕೀರ್ತ್ತಿ |
ಧವ ನವಿರಳಬ್ರಹ್ಮಮೂರ್ತ್ತಿ ವಿಖ್ಯಾತಶಾಂ |
ಭವತತ್ತ್ವಕುಶಲನು ಶಿವಾದ್ವೈತಕೋವಿದನು ಶಿವಮತಶ್ರೀಗಧಿಪನು ||
ರವಿಕೋಟಿಧಾಮ ನುದ್ದಾಮ ನಕಳಂಕಮತಿ |
ಶಿವಲಿಂಗಸಂಭವನು ರೇವಣಾಸಿದ್ಧೇಶ |
ನೆವಗೆ ಕರುಣಿಸುಗೆ ಶಿವಭಕ್ತಿವಿಜ್ಞಾನದುತ್ಸವವ ನಾನಂದದಿಂದೆ ||೯||

ಅಸಮಪಂಚಾಕ್ಷರೀಮಂತ್ರಸಿದ್ಧಿಯನು ಕಾ |
ಣಿಸಿ ವಿಮಳಭಸಿತಘುಟಿಕಾಸಿದ್ಧಿಯನು ಬಿತ್ತ |
ರಿಸಿ ನತರ ಭವಭೀತಿಗುಚ್ಚಾಟನವನು ಮುಕ್ತಿಶ್ರೀಗೆ ಮೋಹನವನು ||
ಕುಸುಮಬಾಣನ ಮದನಮಾಕರ್ಷಣವನು ವಿರ |
ಚಿಸಿ ವೀರಶೈವಸಿದ್ಧಾಂತವನು ಲೇಸಾಗಿ |
ಪಸರಿಸಿದ ರೇವಣಾಸಿದ್ಧೇಶ ನೆಮಗೆ ಪಾಲಿಸುಗೆ ವಾಚಾಸಿದ್ಧಿಯಂ ||೧೦||

ಅರಿಯದಂ ತೇಳ್ನೂರುವತ್ಸರಂ ಭುವನದೊಳ |
ಗರಿವಂತಿ ರೇಳ್ನೂರುವರ್ಷಮುಂ ಸುಖಮಿರ್ದ್ದು |
ನೆರೆ ವೀರಶೈವೋಪದೇಶಮಂ ಸಕಲಸಜ್ಜನಸಂತತಿಗೆ ಕರುಣಿಸಿ ||
ಮಿರುಗುವ ಪರಂಜ್ಯೋತಿ ಯಿಂತಿದೆಂದರುಹಿ ಕ |
ಣ್ದೆರಹುಮಾಡಿದ ರೇವಣಾಸಿದ್ಧಗುರುನಾಥ |
ಗೆರಗುವೆಂ ನಾಡೆ ಶಿವತತ್ತ್ವವಿದ್ಯಾಪ್ರೌಢಿ ಯೆನಗೆ ಸಂಭವಿಸುಗೆಂದು ||೧೧||

ಪರಮಯತಿಪತಿಶಿಲಾದನ ಕುಮಾರನು ಸಮು |
ದ್ಧುರಶೈವಸಿದ್ಧಾಂತಸಾರ ನಘತಿಮಿರನಿ |
ರ್ಹರಣಶೂರನು ಸಕಲಲೋಕಕಾಧಾರನು ಸಮಸ್ತಧರ್ಮ್ಮಾಕಾರನು ||
ಕರುಣದಿಂ ಕೈಸಾರ್ಚ್ಚು ಗೆಮಗಿಷ್ಟಫಲವ ನನ |
ವರತಮುಮಂ ವಿಜಿತಮೋಹನಶರನು ನಂದಿಕೇ |
ಶ್ವರನು ಗಣಕುಲಕೆ ಶೇಖರನು ನತವಜ್ರಪಂಜರನು ಗಿರಿಜೇಶಧರನು ||೧೨||

ಲಿಂಗಾಂಗಿಯನು ನಿರ್ಮಳನ ನಿಷ್ಕಳನ ನೇಕ |
ಲಿಂಗನಿಷ್ಠಾಪರನ ವೀರಮಾಹೇಶಜನ |
ಪುಂಗವನ ಪರಶಿವಮುಖಾಂಬುಜವಿಕಾಸವಿಜ್ಞಾನಕುಶಲನ ನಧಿಕನ ||
ಲಿಂಗಭೋಗೋಪಭೋಗಿಯ ನತುಳಯೋಗಿಯಂ |
ಪಿಂಗದಾನೆನ್ನಂತರಂಗದೊಳು ಭಜಿಸುವೆಂ |
ಭೃಂಗಿನಾಥನ ಸದಾನಂದಯೂಥನ ಬೃಹನ್ನಾಮಯಾಗ್ನಿಕಣಪಾಥನ ||೧೩||

ದೇವವೇಶ್ಯಾಭುಜಂಗನು ದೇವಗಣನುತನು |
ದೇವಾಧಿದೇವನು ಪರಂಜ್ಯೋತಿ ಭದ್ರಕಾ |
ಳೀವದನಕಮಳಮಧುಕರನು ಶರಕೋದಂಡಫಳಕಕರವಾಳಕರನು ||
ಪಾವನಾಂಗನು ದಕ್ಷಯಜ್ಞಘನಕಾಂತಾರ |
ದಾವಾನಲನು ಜಗತ್ಪತಿ ಯೆಮ್ಮ ರಕ್ಷಿಪಂ |
ಶ್ರೀವೀರಭದ್ರ ನಕ್ಷುದ್ರಮಹಿಮಾಮೃತಸಮುದ್ರ ನಭಿನವರುದ್ರನು ||೧೪||

ಕಾಮಿಕಂಮೊದಲು ವಾತುಳವಗ್ರವೆನಿಪ ನಾ |
ನಾಮಹಾದಿವ್ಯಾಗಮವನು ಸದ್ಯೋಜಾತ |
ವಾಮದೇವ ಮಘೋರ ತತ್ಪುರುಷಮೀಶಾನ ಮೆಂಬ ಪಂಚಾನನದೊಳು ||
ಸೋಮಶೇಖರ ನೊರೆಯೆ ನಿಷ್ಠೆಯಿಂ ಕೇಳ್ದದಂ |
ಭೂಮಿಯೊಳ್ಪ್ರಕಟಿಸೆ ತಿರುಜ್ಞಾನಸಂಬಂಧಿ |
ನಾಮಧೇಯಂಬಡೆದ ಷಣ್ಮುಖನ ವಿನತಶತಮುಖನ ಪರಿಕೀರ್ತಿಸುವೆನು ||೧೫||

ಆಗಮಾಮ್ನಾಯ ಶಾಸ್ತ್ರಪ್ರತಾನದೊಳು ಶಿವ |
ನೇ ಗುರು ಸಮಸ್ತದೇವರ್ಗೆಂಬುದಂ ತಥ್ಯ |
ಮಾಗಿ ತಿಳಿದಾರುಹತಮಂ ಬಿಟ್ಟು ಶೈವಧರ್ಮವನೆ ದೃಢದಿಂದೆ ಪಿಡಿದು ||
ನಾಗಕುಂಡಲನ ನನುರಾಗದಿಂ ಪಾಡಿ ತಲೆ |
ದೂಗಿಸಿ ಸಮಗ್ರಸಾಯುಜ್ಯಪದಮಂ ಪಡೆದ |
ವಾಗೀಶನಂ ವಚಶ್ರೀಯೋಗೀಶನಂ ಪರಮಯೋಗೀಶನಂ ಸ್ತುತಿಪೆನು ||೧೬||

ವೃಷಭನ ಸನ್ನಿಧಿ ಗಚ್ಯುತಪ್ರತಿಮೆಯಂ ಬರಿಸಿ |
ಪೊಡಮಡಿಸಿದರು ಪಲವುದಿನ ಸೂರ್ಯಬಿಂಬಮಂ |
ತಡೆದ ರಿಪುಳಾಗದಂತಿರೆ ನದೇವಃಕೇತವಾತ್ಸರ ಮೆನುತ್ತೆ ಜಡಿದು ||

ನುಡಿದ ಪಾರಾಶರನ ತೋಳ ಕಿತ್ತುಯ್ದ ರವ |
ಗಡದ ಮಾರಿಯನು ಕೊಟ್ಟಣದಕ್ಕಿಯಂ ಪೊರಿಸಿ |
ನಡೆಸಿದರು ಮುನ್ನಿನಗ್ಗಳ ಶಿವನ ಶರಣ ರವರಡಿಗಳ್ಗೆ ವಂದಿಸುವೆನು ||೧೭||

ಕಲ್ಲಲಿಟ್ಟೊಲಿಸಿದರು ಕಾದಲೆಯ ಬಟ್ಟಮೊಲೆ |
ಯಲ್ಲಿ ನುಡಿಸಿದರು ಕುಣಿಸಿದ ರಿಂದುಶೇಖರನ |
ಕಲ್ಲನಂದಿಗೆ ಕಬ್ಬ ಮೆಲಸಿದರು ನಿಲಿಸಿದರು ತಂದು ಸೌರಾಷ್ಟ್ರದಿಂದೆ ||
ಕಲ್ಲಜಿನಬಿಂಬ ಸಿಡಿದೊಡೆದುಪೋಗಲು ಬಸದಿ |
ಯಲ್ಲಿ ಶಂಕರನ ನಾದಿಯಗಣೇಶ್ವರ ರವರ |
ಮೆಲ್ಲಡಿಗೆ ವಂದಿಸುವೆ ನೀಕೃತಿಯೊ ಳುಳ್ಳ ಸೊಲ್ಲೆಲ್ಲ ಸೊಗಸಾಗಲೆಂದು ||೧೮||

ಪರಮಶಿವಕವಿತಿಲಕರೆನಿಪ ಹಂಪೆಯ ಹರೀ |
ಶ್ವರನ ಮಗ್ಗೆಯಮಾಯಿದೇವನಂ ಕೆರೆಯಪ |
ದ್ಮರಸರಂ ಪಾಲ್ಕುರಿಕೆಯಾರಾಧ್ಯಸೋಮೇಶನಂ ಚಿತ್ತದೊಳಗೆ ನೆನೆದು ||
ಶರಣೆಂದು ರಚಿಸಲುಜ್ಜುಗಿಸಿದೆನು ರೇವಣೇ |
ಶ್ವರಗುರೂತ್ತಮನ ಸುಚರಿತ್ರದೀಕಾವ್ಯಮಂ |
ಪರಿಪೂರ್ಣಮಾಗಿ ತೋರ್ಕಿದರೊಳು ವಿರಕ್ತಿಭಕ್ತಿಜ್ಞಾನವಿಂತಿದೆಂದು ||೧೯||

ಕವಿಕಮಲ ವಿಮಲ ಶೋಭಾರವಿಯ ಭಾರವಿಯ |
ಶಿವಪದಸ್ತುತಿವಾಗ್ವಿಭೂಷಣನ ಪುಲುಹಣನ |
ಕವಿತಾಕಲಾನಿವಾಸನ ಕಾಳಿದಾಸನ ಮಹಾಪ್ರವೀಣನ ಬಾಣನ ||
ನವರಸಾಂಬುಧಿ ಕರ್ಣಧಾರನ ಮಯೂರನಂ |
ಭುವನೇಜ ವಿಾಗೆ ಬಹುಳಾಮೋದಮಂ ತುಟ್ಟಿ |
ಸವನಿಸಲು ಮನ್ಮರೆ ಭ್ರಮರಿಗೊಳ್ಮಾತೆಂದೆನಿಪ್ಪ ಝೇಂಕೃತಿ ಪೊಣ್ಮಲಿ ||೨೦||

ಈಶಾನ್ಯ ಶಿವಗುರುಗಳಾದಿಯೊಳು ಗೀರ್ವಾಣ |
ಭಾಷೆಯಿಂ ಕೃತಿವೇಳ್ದ ರೇವಣಾಸಿದ್ಧೇಂದ್ರ |
ದೇಶಿಕನ ಪರಮಲೀಲಾಕಥನಮಂ ಸೂಕ್ಷ್ಮವಾಗಿರ ಘಟಾಕಾರದಿಂ ||
ದೇಸಾಳ ವಳವಡಲೊಪ್ಪಿದಂ ಹಂಪೆಯಹ |
ರೀಶ ನಿಂತೀವುಭಯಮತವ ನರಿದೊರೆದೆಂ ವಿ |
ಲಾಸಮಿಗಲೀಮಹಾಕಾವ್ಯವ ರಸಜ್ಞ ಸಂಸೇವ್ಯವ ಕವಿಕಾವ್ಯವ ||೨೧||

ಅರೆಸೊಲ್ಲುವಿಡಿದು ಬಲ್ಲರ ಸಭೆಯ ನೆಯ್ದಿದೊಡೆ |
ನೆರೆ ಸೊಲ್ಲದವ್ಪುದೆನಿಸುವ ಗಾದೆಯಂತೆ ರಸಿ |
ಕರ ಮನವ ಮೆಚ್ಚಿಸುವೆನೆಂಬನಿತ ಬಲ್ಲೆ ನಿಂತಿನಿತುಚಾತುರ್ಯದಿಂದೆ ||
ಒರೆವೆನೀಕೃತಿಯ ನಿದರೊಳು ಸಮನಿಸಿದ ತಪ್ಪ |
ಪರಿಹರಿಸಿ ಗುಣಮನುದ್ಭಾಸಿಪುದು ಶಿವಕವೀ |
ಶ್ವರರು ನಿಮ್ಮಯ ಭೃತ್ಯ ನಾಸಂತುಕಾರಣಂ ಪರತರ್ಕಕಿಂಬುಗೊಡದೆ ||೨೩||
ಓರಂತೆ ಶಷಸರಳಲಳಮಿವಂ ಪ್ರಾಸಕ್ಕೆ |
ಸೇರಿಸಿದೆ ನೀಕಾವ್ಯದೊಳಗೆ ವರ್ಣಕಕವಿ |
ಶ್ರೀರಾಘವಾಂಕಪಂಡಿತನಾದಿಯಾದ ಕಬ್ಬಿಗರು ನಿಜಕೃತಿಯೊಳೊರೆದ ||
ಕಾರಣಂ ನಾಗವರ್ಮಂ ವಿನಿರ್ಮಿಸಿದ ಲರ |
ಡೈರೇವಳರಳಾಃ ಪ್ರಯತ್ನಾಶ್ರಯಾದೆನಿಪ |
ಚಾರುಕರ್ಣಾಟಕ ವ್ಯಾಕರಣಸೂತ್ರ ಮೊದಲಾದುವುಂಟದು ನಿಮಿತ್ತಂ ||೨೪||
ಜ್ಞಾನಕಲೆ ಲಾವಣ್ಯಕಲೆ ವೀರಕಲೆ ಸಂತ |
ತಾನಂದಕಲೆ ಪರಧರ್ಮಕಲೆ ಯಿವು ಭವಾ |
ನೀನಾಥನಿಂದೆ ಸಂಭವಿಸಿ ರೇಣುಕ ಗಣೇಶ್ವರನು ಸೌಂದರನಾಥನು ||
ಭಾನುಕೋಟಿಪ್ರಭಾಮಯ ವೀರಭದ್ರಸು ಷ |
ಡಾನನಂ ವೃಷಭೇಂದ್ರನೆನಿಪ್ಪೆವರಾದರಿ |
ನ್ನಾನೊಲಿದುಪೇಳ್ವೆ ನವರೊಳ್ಮುಖ್ಯವೆನಿಪ ಚಿತ್ಕಲೆಯ ಲೀಲಾಕಥನವಂ ||೨೫||
ಕನ್ನಡಂ ಸಕ್ಕದದೊಳೊಂದಿ ಪುಟವಿಟ್ಟ ಜೆಂ |
ಬೊನ್ನೊಳೊಂದಿದ ತರಂಗಿಸುವ ಕಡುರಂಗಿಡಿದ |
ರನ್ನದಂತಿರಲೆಸೆವ ಪದಬಂಧ ವಚ್ಚಸಿರ ಪಚ್ಚಗಪ್ಪುರವೆರಸಿದ ||
ಉನ್ನತಿಯ ಸವಿಗಂಪ ಸಾಲಿಡುವ ಜಾತಿಬಾ |
ವನ್ನದಂತಿರೆ ಪೇಳ್ವೆನೀ ಕಾವ್ಯಮಂ ಬೆಡಂ |
ಗಿಂ ನಿಖಿಳವಿದ್ವಜ್ಜನಂ ಮೆಚ್ಚೆ ಶಿವಶರಣ ಕರ್ಣಮಂಡನವೆನಿಸಲು ||೨೬||
ಪರಿಪಕ್ವ ಬಂಧುರದ್ರಾಕ್ಷಾಫಳಸ್ತಬಕ |
ದಿರವಿನಂದದೆ ರಸಂ ಬಹಿರಂತರಂಗದೊ |
ಳ್ಪರಿವಡೆಯೆ ಭಾವದೆಸಕಂ ಮೋಹಕೊಳಗಾದ ಮುಗ್ಧೆ ನೋಡುವ ನೋಟದ ||

ಸರಿಸಮಾಗಿರಲು ಕಾವೇರಿಯಗ್ಗದಕಾಲ್ಗೆ |
ದೊರೆಯೆನಿಸ ಲುಪಕಥಾವಿಸ್ತರಂ ಪೇಳ್ವೆ ನೀ |
ಪರಶಿವಜ್ಞಾನನಿಧಿರೇವಣಾಸಿದ್ಧೇಶಗುರುವರನ ಚಾರಿತ್ರವಂ ||೨೬||

ಕಲ್ಲು ಕರಗುವುದುಗ್ರಫಣಿ ಸೋಲ್ವುದೊಣಮರಂ |
ಪಲ್ಲವಿಪು ದೆರಲೆ ಸಿಲುಕುವುದು ಪಶು ಮೋಹಿಪುದು |
ನಿಲ್ಲದಳುವೆಳೆವಸುಳೆ ಸಂತಸಮ ನೆಯ್ದುವುದು ಮುಗಿಲೊಸರ್ದು ಮಳೆಗರೆವುದು ||
ಸಲ್ಲಲಿತಸಂಗೀತರಸಕೆ ಸಾಹಿತ್ಯಮಂ |
ಬಲ್ಲ ನೊರ್ವ್ವ ನಪೂರ್ವ್ವವೀಧರಿತ್ರೀವಳಯ |
ದಲ್ಲಿ ರಸಭಾವಾರ್ಥಚಿತ್ರವರಿವುದು ಸುಲಭವಲ್ಲ ಸಕಲರ್ಗ್ಗದಾಗಿ ||೨೭||

ಚಾರುತರಕಾಮಧೇನುವಿನಮೃತರುಚಿಯ ವೃಂ |
ದಾರಕರ್ಬಲ್ಲಂತೆ ಮಿಕ್ಕನರ್ಬಲ್ಲರೆ ವಿ |
ಚಾರಿಸಲು ಸೊಗಯಿಸುವ ಸೊಬಗಿನಿಂ ಸೋಲಿಸುವ ಸತ್ಕಾವ್ಯರಸದಿಂಪನು ||
ಸಾರಜ್ಞರೆನಿಪ ಭಾವಕ ರರಿವ ಮಾಳ್ಕೆಯಿಂ |
ನೀರಸರ್ಬಲ್ಲರೇ ಪರಿತೋಷದಿಂದಿದಂ |
ಸೂರಿಗಳು ಪಾಲಿಪುದು ನೀವೊಲಿದೊಡದೆ ಸವಾಲಕ್ಷ್ಯವೆನ ಗದುಕಾರಣಂ ||೨೮||

ಬಾಲೆಯರ ಗಾನಾಮೃತಕ್ಕೆ ಪುಳಕಿಪುವೇ ಪ್ರಿ |
ಯಾಲಂಗಳಂತೆ ಮಿಕ್ಕಿನವೃಕ್ಷ ವಮಳಮಧು |
ರಾಲಾಪ ವಳವಟ್ಟ ರಸಭಾವಚಿತ್ರಾರ್ಥನಿವಹ ವೆಡೆವಡೆದೊಪ್ಪುವ ||
ಈಲಲಿತಕೃತಿಯಿಂಪುಸೊಂಪುಗಳ ಬಲ್ಲರೆ ವಿ |
ಶಾಲಮತಿಯುತಸುಜನರಂತೆ ಕುಜನರು ರಸಿಕ |
ರಾಲಿಪುದು ಮುಂಕೊಂಡು ಪರಶಿವನ ಲೀಲಾಮಹತ್ವವೀಕಥೆ ಯದಾಗಿ ||೨೯||

ಭಾವಸಂಭವನ ದರ್ಪವ ತವಿಸಿ ಪರಿಭವಿಸಿ |
ವೈವಸ್ವತನ ವಿಧಾತ್ರನ ಜಯಿಸಿ ಸಕಲಶರ |
ಣಾವಳಿಗೆ ಧರ್ಮಾರ್ಥಕಾಮಮೋಕ್ಷದನೆನಿಸಿ ಶಾಂತಮಲ್ಲೇಶ್ವರನನು ||
ಭಾವಪೂಜೆಯೊ ಳೊಲಿಸಿಕೊಂಡ ಶಿವಯೋಗಿಗಳ |
ದೇವನಂ ಕೀರ್ತಿಸಿ ಕೃತಾರ್ಥತೆಯ ನೆಯ್ದುವೆಂ |
ರೇವಣಾಸಿದ್ಧನ ಜಗತ್ಪ್ರಸಿದ್ಧನ ಮಹೇಶ್ವರಕೃಪಾರಸಸಿದ್ಧನ ||೩೦||

ಈಕೃತಿಯ ಪೆಸರು ಸಿದ್ಧೇಶ್ವರಪುರಾಣ ಏಂ |
ತೀಕೃತಿಗೆ ಪತಿ ಶಾಂತಮಲ್ಲಿಕಾರ್ಜುನಲಿಂಗ |
ಏೕಕೃತಿಯ ಪೇಳಿಸಿದ ನತ್ಯಧಿಕವೀರಶೈವಾಚಾರ್ಯಕುಲವರ್ಯನು ||
ಶ್ರೀಕಂಠನಾಕಾರಮಂ ತಳೆದು ಏತತಮಹಿ |
ಮಾಕರಂ ಬಾಲಸಿದ್ಧೇಶಯತಿರಾಜ ನೆನೆ |
ಲೋಕವ್ಯಾಪಾವಶಿವಶರಣರಂ ತಲೆದೂಗಿಸದು ಧರಿತ್ರೀತಳದೊಳು ||೩೧||

ಶ್ರೀಮನ್ಮಹಾಪ್ರಚುರವೇದಾಂತತತ್ತ್ವವಿ |
ದ್ಯಾಮೇರು ವಜ್ಞಾನಹರ ನಮಳಸುಜ್ಞಾನ |
ಭಾಮಾವನೀಪ್ರಿಯನು ಜನನಲಯವಿರಹಿತನು ಪರಮಪ್ರಕಾಶಮಯನು ||
ಕಾಮಿಕಾದ್ಯಾಗಮಾರ್ಥಪ್ರದೀಪಕವಹ |
ಶ್ರೀಮುಖಾಬ್ಜನು ಬಾಲಸಿದ್ಧಶಿವಯೋಗೀಂದ್ರ |
ನೀಮಹಿತಶಿವಕಾವ್ಯಮಂ ಪೇಳಿಸಿದ ನಿಳೆಗೆ ಪೊಚ್ಚಪೊಸತೆನಿಪಂತಿರೆ ||೩೨||

ರೇವಣಾಸಿದ್ಧೇಂದ್ರಸದ್ಗುರುಪರಂಪರೇಂ |
ದೀವರಸುಧಾಕರ ನುದಾತ್ತಕರುಣಾಕರನು |
ಕೈವಲ್ಯನಿಧಿಯ ಕಾಣಿಸುವ ಸಮ್ಯಗ್ಜ್ಞಾನವಿಲಸದಂಜನಸಿದ್ಧನು ||
ಭಾವಲಿಂಗಪ್ರಾಣಲಿಂಗೇಷ್ಟಲಿಂಗತ್ರ |
ಯಾವಧಾನವ ನೊರೆದ ದೇಶಿಕನು ದುರಿತವಿ |
ದ್ರಾವಣನು ಬಾಲಿಸಿದ್ಧೇಶ್ವರಮಹಾಯೋಗಿ ಪೇಳಿಸಿದ ನೀಕಾವ್ಯವಂ ||೩೩||

ಗುರುಶಾಂತಮಲ್ಲಿಕಾರ್ಜುನಪಾದಪದ್ಮಮಧು |
ಕರನು ಕಾಶ್ಯಪಗೋತ್ರಜಾತನು ಯಜುರ್ವೇದ |
ಪರಿಣತನು ಮಾಯಣಾತ್ಮೋದ್ಭವನು ಶೈವಾಗಮಜ್ಞನು ಕಲಾಭಿಜ್ಞನು ||
ಪರಮಬೋಧಾಯನಮಹಾಸೂತ್ರಶೋಭಿತನು |
ಸರಸಗೀರ್ವಾಣಭಾಷಾಯುಕ್ತಕರ್ಣಾಟ |
ವರವಚಶ್ರೀಲಸಿತವದನತಾಮರಸ ಬೊಮ್ಮರಸ ಪೇಳಿದುದೀಕೃತಿ ||೩೪||

ಅರಲೊಳುಣ್ಮಿದಕಂಪು ಸಂಸರ್ಗದಿಂದೆ ಬಂ |
ದೆರಲೊಳೊಂದುವ ತೆರದಿ ನೆನ್ನಯ ವಚಶ್ರೀಗೆ |
ಹರಕವೀಶ್ವರರಾದಿಯೊಳ್ಪೇಳ್ದ ಕಾವ್ಯೋಕ್ತಿವಾಸನಾಧಿಕ್ಯದಿಂದೆ ||

ದೊರೆಕೊಂಬುದಧಿಕ ಭಕ್ತಿಜ್ಞಾನವೆಂದು ಶಂ |
ಕರಕಥಾಕರ್ಣನಂ ಗೆಯ್ದೊರೆವೆನೀಕೃತಿಯ |
ಶರಣಜನರೀ ಕಾವ್ಯರಸವ ಕಿವಿಗುಡಿತೆಯಿಂದೀಂಟಿ ಸುಖಮಂ ಪಡೆವುದು ||೩೫||

ಗಂಗೆಯಂ ಮಸ್ತಕದೊಳಾಂತನು ಸದಾಶಿವನು |
ಗಂಗೆ ಮೊದಲೆನಿಸುವಷ್ಟಾಷಷ್ಟಿ ದಿವ್ಯತೀ |
ರ್ಥಂಗಳಂ ಪಾದದುಂಗುಟದೊಳಾಂತನು ರೇವಣಾಸಿದ್ಧಗುರುವದಾಗಿ ||
ಪೊಂಗಿ ಪರಮಾನಂದದಿಂದೆ ತುತಿಸುವೆನು ಹರ |
ನಿಂ ಗುರುವೆ ಮಿಗಿಲೆನುತ್ತಾಂ ಕೃತಿವ್ಯಾಜದಿಂ |
ದಂಗೀಕರಿಪುದಿದಂ ನಗುರೋರಧಿಕಮೆಂಬ ಶ್ರುತಿವಾಕ್ಯದರ್ಥಜ್ಞರು ||೩೬||

ಸ್ವಾತಂತ್ರ್ಯವೆನಗೆಲ್ಲಿಯದು ಹೃದಯದೊಳು ಪರಂ |
ಜ್ಯೋತಿ ನೀಂ ನೆಲೆವಡೆದು ಪರತತ್ತ್ವಬೋಧ ಮು |
ದ್ಯೋತಿಪಂತಿರೆ ಪುಟ್ಟಿಸಿದ ಮೃದೂಕ್ತಿಗಳ ಸೇರುವೆಯೆ ಸತ್ಕೃತಿಯಪ್ಪುದು ||
ಈತೆರಂ ತಪ್ಪದೆಂದಾನೊರೆವೆ ನಿಂತಿದಂ |
ಚಾತುರ್ಯದಿಂ ನಡೆಸು ರೇವಣಾಸಿದ್ಧ ಶಿವ |
ಜಾತ ಗುರುನಾಥ ವಿಖ್ಯಾತ ಮತ್ತ್ರಾತ ಪುರುಹೂತವಿನಮಿತ ಮುನಿನುತ ||೩೭||

ಶಾಂತಿರಸದಿಂ ಮೋಕ್ಷಸಿದ್ಧಿ ಶೃಂಗಾರಾದ್ಯ |
ನಂತರಸವೆಂಟಾರ್ತ್ತಿ ರಾಗಕಾರಿಗಳೆಂಬು |
ದಂತಿರ್ಕೆ ಶಾಂತಮಲ್ಲೇಶ್ವರ ಕಥಾಯುಕ್ತವಾದೊಡುಳಿದ ರಸಂಗಳು ||
ಶಾಂತತ್ವವೈದುವುವು ಸಿದ್ಧರಸದೊಡವೆರಸಿ |
ಕಾಂತಿಮತ್ಕನಕಮಾಗೊಪ್ಪುವುವು ಲೋಹಂಗ |
ಳಂತದು ನಿಮಿತ್ತವೀಕೃತಿ ಸರ್ವರಸಭರಿತಮಾಗಿಯುಂ ಸುಕೃತಪ್ರದಂ ||೩೮||

ಪರಶಕ್ತಿ ಪಂಚಕಾರಣ ಪುರುಷರಂ ಪಡೆದ |
ಳರಸನಾ ಪರಶಕ್ತಿಗೀಶ್ವರಂ ಸೋಮಶೇ |
ಖರನಾತನುದರದಿಂ ಜನಿಸಿದ ಪ್ರತಿಮಪ್ರಭಾವ ನಘವನದಾವನು ||
ಪರಮಗುರು ರೇವಣಾಸಿದ್ಧೇಶ್ವರನ ಕಥಾಂ |
ತರವೀಪುರಾಣವಿದನತ್ಯಂತಭಕ್ತಿಯಿಂ |
ಬರೆದೋದಿದೊಡೆ ಕೇಳಿದೊಡೆ ಸಂಶಯುವದೇಕೆ ಸಕಲಸಿದ್ಧಿಗಳಪ್ಪುವು ||೩೯||

ಶ್ರೀ ರೇವಣಾಸಿದ್ಧ ಗುರುನಾಥ ಮಾನಸಸ |
ರೋರುಹಾಂತರ್ನಿಳಯ ಶಾಂತಮಲ್ಲೇಶ್ವರಸ |
ಮಾರಾಧನಾಸಕ್ತ ಚಿತ್ತನೆನಿಸುವ ಬಾಲಸಿದ್ಧೇಂದ್ರ ಯತಿರಾಜನ ||
ಕಾರುಣ್ಯರಸ ಕಟಾಕ್ಷದ ಬಲದೊಳಾಂ ಸವಿ |
ಸ್ತಾರದಿಂ ಪೇಳ್ದ ಸಿದ್ಧೇಶ್ವರ ಪುರಾಣದೊಳು |
ಸಾರಜ್ಞ ಶಿವಶರಣರಾಲಿಪುದು ಕಾವ್ಯಮುಖಪದ್ಧತಿಯ ಮೊದಲಸಂಧಿ ||೪೦||

ಹರನ ಸಮ್ಯಗ್ಜ್ಞಾನಕಲೆ ತಾನೆ ರೇವಣೇ |
ಶ್ವರನಾದುದಾತನ ವಿಚಿತ್ರ ಚರಿತ್ರದ ಕಥಾಂ |
ತರವೀ ಮಹಾಕಾವ್ಯವಿದರೊಳಾವಂ ಭಕ್ತಿಯಿಂದಲೊಂದೆರಡುಸೊಲ್ಲಂ ||
ಪರಚಿತ್ತವಿಲ್ಲದಾಲಿಸಲಿಷ್ಟ ಫಲಸಿದ್ಧಿ |
ದೊರೆಕೊಂಬುದಾಯುರಾರೋಗ್ಯ ಪರಮೈಶ್ವರ್ಯ |
ಪರಿವರ್ಧಿಪುದು ಸಂತತಂ ಶಾಂತಮಲ್ಲಿಕಾರ್ಜುನನೊಲವಿನಿಂ ಪೊರೆವನು ||೪೧||

## ಮೊದಲನೆಯ ಸಂಧಿ ಸಂಪೂರ್ಣಂ.



ಶ್ರೀ ಸಾಂಬಾಯನಮಃ.

## ೨ ನೆಯ ಸಂಧಿಯು.



ಪ || ಪರಮ ಪ್ರಸಾದಮಂ ಸಲಹಿ ರೇಣುಕಗಣೇ |
ಶ್ವರಗೆ ನೀನವನಿಯೊಳು ವೀರಶೈವವ ಸಮು |
ದ್ಧರಿಸೆಂದು ಶಂಕರಂ ಕಳುಹಲಾ ಪ್ರಮಥಪತಿ ಭೂಲೋಕಮಂಸಾರ್ದನು ||

ಮುಗ್ಧಭಕ್ತಿಪ್ರೀತ ಮಲುಹಣಶಾದ್ಯತಿಶಯವಿ |
ದಗ್ಧ ಕವಿನುತಿಸಮಾಕರ್ಣನಾನಂದ ಸಂ |
ದಿಗ್ಧಮಾನಸ ಸಚ್ಚಿದಾಕಾರ ನಿತ್ಯ ನಿರ್ಮಳ ವಿಧುಕಲಾಮಲ್ಲಿಕಾ ||
ಸ್ರಗ್ಧರ ಮಹೇಶ್ವರೀ ದೃಗ್ಧವಳವರ್ಣ ಸ |
ವ್ಯಗ್ದಾಮ ಪರಿವೃತೋರೋಭಾಗ ಮಾಹಾತ್ಮ್ಯ |
ದುಗ್ಧಾಂಬುನಿಧಿ ಶಾಂತಮಲ್ಲಿಕಾರ್ಜುನ ಜಯ ಜಗನ್ಮಯನೆ ಮೃತ್ಯುಂಜಯ ||೧||

ಈಕೃತಿಯ ಪೀಠಿಕಾಪ್ರಕರಣ ವದೆಂತೆನಲು |
ಕೋಕನದಗರ್ಭಾಂಡದಗ್ರದೊಳು ಪದಿನಾಲ್ಕು |
ಲೋಕಕಾಸ್ಪದಮಾಗಿ ಮೂವತ್ತೆರಳ್ಕೋಟಿಯೋಜನವಿಶಾಲದಿಂದೆ ||
ಶ್ರೀಕರಂ ಬಗೆಗೊಳಸ ಲನಿತುದ್ದದಿಂದೆ ಶಿವ |
ಲೋಕ ಮೊಪ್ಪುತಿಹುದು ದಿವ್ಯತೇಜೋಮಯ |
ಪ್ರಾಕಾರ ಮೆಸೆಯೆ ಯೋಗಿಧ್ಯಾನದೃಷ್ಟಿಗೋಚರವಾಗಿ ಪೆರ್ಮೆ ಮಿಗಲು ||೨||

ಆಮಹಾಶಿವಲೋಕದಿಂದ್ರದಿಗ್ದ್ವಾರದೊಳು |
ರಾಮಣೀಯಕಹಂಸವಾಹನಂ ತ್ರಿನಯನಂ |
ಹೇಮೋಪವೀತ ಪಾಶಾಕ್ಷ ಮಾಲಾಕಮಂಡಲುದಂಡಕಲಿತಕರನು ||
ಭಾಮೆಯೇ ಬ್ರಾಹ್ಮಿಯಾಗಿರಲು ತನ್ನಾಕೃತಿಯ |
ಭೀಮಬಲ ರೇಳ್ಕೋಟಿಭೈರವರುಸಹಿತಲು |
ದ್ದಾಮತೇಜಸ್ವಿ ಯಸಿತಾಂಗಭೈರವನಿಹನು ಗೌರವದ ಪದವ ಪಡೆದು ||೩||

ಆಲೋಕದೋಳ್ ಖಡ್ಗಖಟ್ವಾಂಗಡಮರುತ್ರಿ |
ಶೂಲಂಗಳಂ ಕರಚತುಷ್ಟಯದೊಳಳವಡಿಸಿ |
ಲೀಲೆಯಂ ಮಾಹೇಶರೀಶಕ್ತಿಯೊಡವೆರಸಿ ಶಾಕ್ವರಸಮಾರೂಢನು ||
ಭಾಳನೇತ್ರನು ಪಂಚದಶಕೋಟಿಭೈರವರ |
ಮೇಳದಿಂ ದಮಳಕನಕಾಂಗ ನಪ್ಪ್ಯನ್ನತಕ |
ರಾಳದಂಷ್ಟ್ರಾಸ್ಯ ರುರುಭೈರವಂ ವಹ್ನಿದಿಗ್ದ್ವಾರಮಂ ಕಾಯ್ದಿರ್ಪನು ||೪||

ದಂಡಧರದಿಗ್ದ್ವಾರದೊಳು ಶೂಲಪವಿತಾಮ್ರ |
ತುಂಡಶಕ್ತಿಗಳನಾಂತಧಿಕಸಂರಂಭದಿಂ |
ಮಂಡಿಸಿ ಮಯೂರದಗ್ರದೊಳ ಕೌಮಾರಿಸಹಿತಂ ನಿಜಾಕಾರಧರರು ||
ಮಂಡಲಿಸಿ ದಶಕೋಟಿಭೈರವರು ತನ್ನೊಡನ |
ಖಂಡಿತೈಶ್ವರ್ಯದಿಂ ದೊಪ್ಪುತಿರೆ ರಂಜಿಪನು |
ಚಂಡಭೈರವನು ನಯನತ್ರಯನು ತರುಣಮಾರ್ತಾಂಡಸಮವರ್ಣಾಂಗನು ||೫||

ನೈಋತದಿಶಾದ್ವಾರದೊಳು ಕ್ರೋಧನೆಂದೆನಿಪ |
ಭೈರವಂ ಪೀತವರ್ಣಂ ತ್ರಿಲೋಚನನು ಗರು |
ಡಾರೂಢ ನುನ್ನತನು ಶಾರ್ಙಕೌಮೋದಕೀಶಂಖಚಕ್ರಾಂಕರನು ||

ನಾರಾಯಣೀಶಕ್ತಿಯುತನು ತನ್ನಾಕೃತಿಯ |
ಭೈರವರು ಪಂಚಕೋಟಿಗಳಿರಲು ತನ್ನೊಡನೆ |
ಘೋರರೂಪಂ ಯೋಗಿನೀನಿಕರಸೇವಿತಂ ಕಾಯ್ದಿರ್ಪ್ಪನಲ್ತಿಯಿಂದೆ ||೬||
ಕಾರಮುಗಿಲಂತೆ ವರ್ಣಂ ತನಗೆ ರಮಣಿಯೇ |
ವಾರಾಹಿ ಮಹಿಷವೇ ವಾಹನಂ ನಿಜರೂಪ |
ಧಾರಿಗಳು ಸುಭಟರರುಕೋಟಿ ತಳೆದುವೆ ಶಂಖಹಲಖೇಟಮುಸಲಂಗಳು ||
ಓರಂತಿರಿಂತು ರಾರಾಜಿಸಲು ವರುಣದಿ |
ಗ್ದ್ವಾರದೊಳು ರೌದ್ರರಸಪೂರ್ಣನೆನಿಪುನ್ಮತ್ತ |
ಭೈರವಂ ಕಾಯ್ದಿರ್ಪ್ಪನುರುತರಜಟಾಪಟಲಭಸಿತ ತ್ರಿಪುಂಡ್ರಧರನು ||೭||
ಸುರಗಜವನಡರಿ ಕರನಾಲ್ಕರೊಳು ಶಕ್ತಿತೋ |
ಮರಧನುರ್ವ್ರಜ್ರಂಗಳಂ ಪಿಡಿದು ತನು ಪೊಳೆಯೆ |
ಸರಸಿರುಹರಾಗಮಣಿಯಂತೆ ಬಿಸುಗಣ್ಮೆಸುಗ ಲಿಂದ್ರಾಣಿ ಕಾಂತೆಯಾಗಿ ||
ಇರಲು ತನ್ನಾಕಾರದರು ಮೂರುಕೋಟಿ ಪರಿ |
ಚರಭೈರವರ ಬೆರೆಸಿ ಕಾಯ್ದಿರ್ಪ್ಪ ನದಟಿನಿಂ |
ಮರುದಾಶೆಯೊಳು ಕಪಾಲಿಯೆನಿಪ್ಪ ಭೈರವಂ ಸಂಪದದ ಸೊಂಪನಾಳ್ದು ||೮||
ಚಾಮುಂಡಿಯೇ ಶಕ್ತಿ ವಾಯಸವೆ ವಾಹನಂ |
ಧೂಮವರ್ಣಂ ನಿಜಾಂಗಂ ಭುಜಂ ನಾಲ್ಕು ಘಂ |
ಟಾಮಿತ ಕಪಾಲಡಮರು ತ್ರಿಶೂಲಂಗಳೇ ಧರಿಸಿರ್ಪ್ಪ ವಿಂತೊಪ್ಪುವ ||
ಧೂಮಧ್ವಜಾಂಬಕಂ ಪನ್ನೆರಳ್ಕೋಟಿ ನಿ |
ಸ್ಸೀಮ ಭೈರವರು ಸಹಿತಿರ್ಪ್ಪ ನುತ್ತರದಿಶಾ |
ಸೀಮೆಯೊಳು ಭೀಷಣನೆನಿಪ್ಪ ಭೈರವನು ಫಣಿಭೂಷಣಾಲಂಕರಣನು ||೯||
ಗಿರಿಕಾಧಿರೂಢ ನಾಕಲಿತಖೇಟಕಗದಾ |
ಕರವಾಳಫಲಕ ಶೋಭಿತನು ಪಣೆಗಣ್ಣನು |
ದ್ಧುರ ಹಿರಣ್ಯಪ್ರಭಾಪೂರಿತಶರೀರ ನೈಶಾನ್ಯದಿಗ್ದ್ವಾರದಲ್ಲಿ ||
ವರಮಹಾಕಾಳಿಯಾಣ್ಮನು ನಿಜಾಕಾರದವ |
ರರಲೆಂಟುಕೋಟಿ ಭೈರವರು ತನ್ನೊಡನೆ ಏ |
ಸ್ತರಸೌಖ್ಯದಿಂದಿಹನು ಸಹ್ಮಾರನೆಂಬ ಭೈರವನು ಬಂಧುರವಿಭವನು ||೧೦||

ಶ್ರೀಕಂಠನಾಜ್ಞೆಯಿಂ ದ್ವಾರವೆಂಟರೊಳಿಂತ |
ನೇಕ ಭೈರವರು ಕಾಯ್ದಿರ್ದರೆ ಸೋಮಸೂರ್ಯವೀ |
ಧೀಕದಂಬಂ ಶತಸಹಸ್ರವೆಸೆಯಲು ಕೇರಿಗೋರೊರ್ವ ಗಣಮುಖ್ಯರು ||
ನಾಕಜನಿಕಾಯಸೇವಿತರು ನೆಲಸಿರಲು ಶಿವ |
ಲೋಕಮೊಪ್ಪುತ್ತಿಹುದು ಭುವನಸಂಕುಳವಲ್ಲ |
ರೀಕಂದ ಮುಪನಿಷತ್ಕೋವಿದ ಮನಃಕೀರಮಾಕಂದ ಮಚಲಕಂದಂ ||೧೧||

ಭಾಸುರ ವಿಶೇಷಪ್ರಕಾಶ ಮಣಿಕಾಂಚನ |
ಪ್ರಾಸಾದ ಮಾಟಕೂಟದಗಣನೆ ಯಿನಿತೆಂಬ |
ಸಾಸಿಗರದಾರು ತಾರಾನಿಕರದಿಂದೆ ಮಳೆವನಿಯಿಂದೆ ನದಿಯ ಮಳಲ ||
ರಾಸಿಯಿಂದಧಿಕ ವಾಗ್ಯಹತತಿಯೊಳಚಲಪರಿ |
ತೋಷದಿಂ ರುದ್ರಗಣಕೋಟಿಗಳ್ ರುದ್ರಕೆ |
ನ್ಯಾಸಮೂಹಂ ಶಿವನನೇಕಾಗ್ರಚಿತ್ತದಿಂ ಭಜಿಸುತಾ ಜಗದೊಳಿಹರು ||೧೨||

ನಿರುಪಮ ಪವಿತ್ರಚರಿತರು ಶಿವಜ್ಞಾನಿಗಳು |
ಪರಮ ಮಾಹೇಶ್ವರರು ಗುರುಭಕ್ತಿನಿಷ್ಠಾಪ |
ರರು ಮಹಾಲಿಂಗಪ್ರಸಾದಿಗಳು ಶಿವಶರಣರೈಕ್ಯ ರಗಣಿತ ಮಹಿಮರು ||
ಕರಣತ್ರಯದೊಳಭವನಲ್ಲದಿತರವ ನರಿಯ |
ದರು ಜಿತೇಂದ್ರಿಯರಹಿಂಸಾ ಧರ್ಮಶೀಲರ |
ಪ್ಪರು ವಿರಾಜಿಸುತ ಮಾಶಿವಲೋಕದವಿಳಲೋಕಪ್ರದೇಶದೊಳಗೆ ||೧೩||

ಆಲೋಕಮಧ್ಯದೊಳು ಬಗೆಗಚೋರವಾಗು |
ತಾಲೋಕನಾತೀತವೆನಿಸಿ ತವೆ ಬಳ್ಳಿವರಿ |
ದಾಲೋಕಸಮುದಯವ ನೊಳಕೊಂಡ ಚಿನ್ನರನ್ನದ ಪಿರಿಯಕರುಮಾಡದ ||
ಸಾಲಸೊಬಗಿಂದೆ ಚಿತ್ರಜ್ಯೋತಿರಾಕೃತಿಯ |
ನಲಮಂಡಲದ ಬಳಸಿಂದೆ ಶಂಕರನತಿವಿ |
ಶಾಲರಾಜಾವಾಸ ವೀರೈದುಕೋಟಿಯೋಜನದ ಹರಹಿನೊಳೆಸೆವುದು ||೧೪||

ಮರಕತದ ಜಗತಿ ಮಾಣಿಕದ ನೆಲೆಗಟ್ಟು ಬ |
ಜ್ಜರಗಂಬ ಮಿಂದ್ರನೀಲದತೊಲೆ ನವೀನಶು |
ಕ್ತಿರುಹದಗ್ಗದ ಬೋಗರಿ ವೈಡೂರ್ಯಮಣಿಯ ಬೋದಿಗೆ ಮದನಕೈಕಪೋತ ||

ಸ್ಫುರಿಸುತಿಹ ಗೋಮೇಧಿಕದ ದಾರವಟ್ಟ ಸಿಂ |
ಗರವಿಡಿದ ಪವಳವಳ್ಳಿಯ ಜುಂಜುಲೋವೆ ಸಡ |
ಗರದ ಸಂಭ್ರಮದಿ ನೊಪ್ಪುವ ಭದ್ರಮಂಟಪಾವಳಿ ರಯ್ಯವಾಗಿರ್ದುದು ||೧೫||
ಒಂದುಲಕ್ಷದ ಯೋಜನ ಪ್ರಮಾಣೋನ್ನತಂ |
ಚಂದದಿಂ ಬೆಳೆದು ಋಗ್ವೇದ ಗೋಪುರರೂಪ |
ದಿಂದೊಪ್ಪೆ ಪೂರ್ವದಿಕ್ಕಿನೊಳು ಕೂಷ್ಮಾಂಡಗಣ ನಾಲ್ಕರ್ಬುದಂ ಬಳಸಿರೆ ||
ನಂದೀಶನಲ್ಲಿ ಶಶಿಕಾಂತದಂಡದ ಧೀರ |
ವಂದದೊಳು ಕನಕಮಯವೇತ್ರಮಂ ಪಿಡಿದಜ ಮು |
ಕುಂದ ಶಕ್ರಾದಿ ದಿವಿಜರು ಸಮಯಮಂ ಪಾರ್ದುನಿಂದಿರೆ ವಿರಾಜಿಸುವನು ||೧೬||
ಶ್ಯಾಮವರ್ಣದಿ ನೇಕಲಕ್ಷಯೋಜನ ಪರಿ |
ಪ್ರಾಮಾಣ್ಯದಿಂ ಯಜುರ್ವೇದ ದಕ್ಷಿಣದೊಳಭಿ |
ರಾಮ ಗೋಪುರರೂಪದಿಂದೆ ಕಡುಶೋಭಿಸಲು ದಕ್ಷಮಖವಿಧ್ವಂಸನನು ||
ರೋಮಜರಸಂಖ್ಯಾತರೋಲೈಸೆ ಭದ್ರಕಾ |
ಳೀಮನೋಹರನು ನತಜನದುರಿತಹರ ಪುಣ್ಯ |
ನಾಮಧೇಯನು ದಿವ್ಯತೇಜೋನಿಕಾಯನಿರ್ಪ್ಪನು ವೀರಭದ್ರನಲ್ಲಿ ||೧೭||
ಅತಿ ಧವಳವರ್ಣದಿಂ ಸಾಮವೇದಂ ಸಮು |
ನ್ನತಿಯೊಂದುಲಕ್ಷಯೋಜನವೊಪ್ಪೆ ವಿಶ್ವವಿ |
ಶ್ರುತವೆನಿಸುತಿರ್ಪ್ಪ ಗೋಪುರವಾಗಿ ರಂಜಿಸುತ್ತಿರಲು ಮಂಜುಳತೆ ವಡೆದು ||
ಸತತಂ ಸಮಸ್ತ ರುದ್ರಗಣಂಗಳಿಗೆ ತಾನೆ |
ಪತಿಯೆನಿಸಿ ವಿಭ್ರಾಜಿಸುತ್ತಿಹನು ನೀಲಲೋ |
ಹಿತ ಮಹಾರುದ್ರನು ಸಮುದ್ರಾಧಿಪತಿಯ ದಿಗ್ದ್ವಾರದೊಳಗಿಂಬುವಡೆದು ||೧೮||
ಬಡಗಲೊಳಥರ್ವಣಾಮ್ನಾಯಗೋಪುರ ವದರ |
ನಿಡಿದೊಂದುಲಕ್ಷ ಯೋಜನದನಿತು ವರ್ಣಮೊ |
ಳ್ಪಡರ್ದ ಕುಂಕುಮವರ್ಣದಂತೆ ಕಾಯ್ದಿರ್ಪ್ಪವನೆ ಮಾಕಾಳಗಣನಾಥನು ||
ದೃಢಚಿತ್ತದುತ್ತಮದಸಂಖ್ಯಾತಗಣದ ಕ |
ಟ್ಟೊಡೆಯನಾಗಿಹ ನಾತ ನಿಂತು ನಾಲ್ಕುಂದ್ವಾರ |
ಮೃಡನರಮನೆಯ ಮುಂದುಗಡೆ ಸೊಗಯಿಸುವುದು ಕಂಗಳಿಗೆ ಮಂಗಳವಬೀರಿ ||೧೯||

ತಾವರೆಯ ಕೈರವದ ಬಿದ್ದಿನರ ಪಜ್ಜಳಿಪ |
ಪಾವಕನ ಬೆಳಗಿಗೀರೆಂಟುಸಾಸಿರಮಡಿಯ |
ಮೂವರಿಚ್ಚಾ ಸಿರಮಡಿಯ ತೇಜ ತೆಕ್ಕೆಗೊಂಡುಕ್ಕಿ ಮಹದಾಕಾಶವ ||
ತೀವಲೀ ಗೋಪುರಂಗಳಿ ನೊಳಗೆ ಶತಕೋಟಿ |
ಗಾವುದದ ವಿಸ್ತೀರ್ಣದಿಂದಲಿರ್ಪುದು ಮಹಾ |
ದೇವನೋಲಗಶಾಲೆ ಕೈವಲ್ಯಭೃಂಗಿಗಾ ಮೋದವತ್ಕುಸುಮಮಾಳೆ ||೨೦||

ಕನ್ನಡಿಯೊಳೊಂದಿ ಕಾಣಿಪ ದಂತಿಯಂತೊಪ್ಪು |
ಗುನ್ನಳಿನ ಗರ್ಭಾಂಡವಾ ಸಭಾವಿಸ್ತಾರ |
ದೌನ್ನತ್ಯಮಂ ಪಡೆದ ತೇಜೋವಿಲಾಸದಿಂ ಮುಂಬಗಲ ಪೊಸನೇಸರ ||
ಮುನ್ನಿಂದ ಮಿಂಚುಬುಳುವಿನ ಬಳಗದಂತಿಹುದು |
ಪನ್ನಗೇಂದ್ರನ ಫಣಾಮಣಿನಿವಹ ವದರಿದಿರೊ |
ಳಿನ್ನು ಬಣ್ಣಿಸಬಲ್ಲರಾರು ವಿಶ್ವಂಭರಾ ಚಕ್ರದೊಳಗದರ ಪೆಂಪಂ ||೨೧||

ಆಮಹಾಸ್ಥಾನ ಮಂಟಪದೊಳಗೆ ಪರಮಪ್ರ |
ಭಾಮಂಡಲಂಸೈಪುದಿದ ದಿವ್ಯಪೀಠಂ ನೋಡೆ |
ಮಾಮಸಕದಿಂದೊಂದುಲಕ್ಷಯೋಜನದುದ್ದದಿಂದನಿತು ವಿಸ್ತೀರ್ಣದಿಂ ||
ಮೈಮೆವಡೆದಿರ್ಪುದೈಶೌನ್ಯದೊಳಗೈಶ್ವರ್ಯ |
ವೇ ಮೃಗೇಂದ್ರಾಕಾರದಿಂ ವಿಮಳಧರ್ಮಸಂ |
ಸ್ತೋಮವೇ ವೃಷಭರೂಪದಿ ನನಲದಿಕ್ಕಿನೊಳ್ತಳೆದಿರಲು ಬೆನ್ನೊಳಾಂತು ||೨೨||

ವಿನುತ ಸುಜ್ಞಾನ ಶಾಂತಾಕಾರದಿಂ ನೃವಾ |
ಹನನತ್ತಪೊತ್ತು ವೈರಾಗ್ಯವಿಭವಾಗಿ ತಾ |
ಳ್ದನಿಲನೊಳಿರಲ್ಪೀಠಮೊಪ್ಪುವುದು ಪೂರ್ವಪಶ್ಚಿಮ ದಕ್ಷಿಣೋತ್ತರದೊಳು ||
ಘನತರದ ಭೂತರೂಪದಧರ್ಮಮಂ ವಿಕಟ |
ತನುವೆನಿಸುವಜ್ಞಾನಮಂ ಘೋರವೇಷಧರ |
ಮೆನಿಪವೈರಾಗ್ಯಮಂ ವಿಕೃತಾಂಗಮೆನಿಸುವೈಶ್ವರ್ಯಮಂ ಮೆಟ್ಟಿ ನಿಂದು ||೨೩||

ಇಂತೆಂಟುಪಾದದಿಂ ದೊಪ್ಪುವಂತಾ ಪೀಠಿ |
ಕಾಂತರಾಳದೊಳು ಶೇಷಂ ನಾಳವಾಗೆ ಜೆ |
ಲ್ವಂತಾಳಿದಣಿಮಾದಿಸಿದ್ಧಿಗಳು ನಿಟ್ಟಿಸಳ್ಗಳಾಗೆ ವಿದ್ಯಾಧೀಶರು ||

ಮುಂತಾದವರು ಕೇಸರಂಗಳಾಗಲು ಕೂಡೆ |
ತಿಂತಿಣಿಸೆ ವಾಮಾದಿಶಕ್ತಿ ಕರ್ಣಿಕೆಯಿಂದ |
ದಂತೆ ಸೂರ್ಯ್ಯಾಗ್ನಿಸೋಮಮೂರ್ಮಿಸುಗೆ ಪದ್ಮದಾಕೃತಿಯ ಗದ್ದುಗೆ ಯೆಸೆದುದು ||೨೪||

ಆಪದ್ಮವಿಷ್ಟರದ ಕರ್ಣಿಕಾಮಧ್ಯದೊಳು |
ಶ್ರೀಪರಂಜ್ಯೋತಿಸ್ವರೂಪನು ಸದಾಶಿವನು |
ತಾಪತ್ರಯಾಪಹರಣನು ಸನಕಮುಖ್ಯ ಮುನಿಜನಬೋಧದೃಕ್ಸುಲಭನು ||
ಲೋಪಮಾಯನು ಶಾಂತಮಲ್ಲಿಕಾರ್ಜುನನು ಭುಜ |
ಗೋಪವೀತನು ಶಂಭು ಶಂಕರನು ಶರ್ವನು ವಿ |
ರೂಪಾಕ್ಷ ನಾನತಾಭೀಷ್ಟಸಿದ್ಧಿದನು ನಿರ್ಲೇಪ ನೊಪ್ಪುತ್ತಿರ್ದನು ||೨೫||

ಶೂಲಪವ್ಯಸಿ ಪರಶುವರದಾನ್ವಿತಂ ಬಲದ |
ತೋಳೈದು ರಂಜಿಸಲು ಫಣಿಪಾಶಘಂಟಿಕಾ |
ಕಾಲಾನಲಾಭಯಸಮನ್ವಿತಂ ವಾಮಹಸ್ತದ ಪಂಚಕಂ ರಂಜಿಸೆ ||
ನೀಲಕಂಠನು ಪಂಚದಶನೇತ್ರ ನೈಮೊಗನು |
ಮೂಲಮಂತ್ರಾಕ್ಷರಾಕಾರ ನತ್ಯುನ್ನತ |
ವ್ಯಾಳಾಜಿನಾಂಶುಕಾವೃತನು ಶುದ್ಧಸ್ಫಟಿಕಸಂಕಾಶ ನೊಪ್ಪಿರ್ದನು ||೨೬||

ಅಲರ್ದ ಮಲ್ಲಿಗೆಯ ಮೊಲ್ಲೆಯ ಮಾಲೆಯಂತೆ ಪೊಳೆ |
ವೆಳೆಮುತ್ತುಗಳ ರಾಸಿಯಂತೆ ತನಿವಾಲ ನೊರೆ |
ಗಳ ತಂಡದಂತೊಪ್ಪುವೀಶಾನಮುಖದ ಮುಂಬಿನೊಳಿರ್ದು ಪಂಚಮುಖನು ||
ತಳತಳಿಸುವೀಶಾನನೆಂಬ ಪುರುಷನು ಕರಾ |
ಕಲಿತಾಕ್ಷದಾಮ ನಾಮಂತ್ರದಿಂ ತುತಿಸಿ ನಿ |
ಶ್ಚಲಭಾವದಿಂದೊಪ್ಪುತಿರ್ದನು ಸದಾಶಿವನು ಭವನು ಲೋಕೈಕಧವನು ||೨೭||

ಕೆಂಬರಲ ಜೆಂಗದಿರ್ಗಳಂತೆ ಪೊಸಸುಸಿಲ ರವಿ |
ಬಿಂಬದಿಂ ಪೊರಪೊಣ್ಮುವೆಳೆವಿಸಿಲ ಗೊಂದಣವಿ |
ದೆಂಬಂತೆ ಪೂರ್ವದಿಕ್ಕಿನೊಳು ತತ್ಪುರುಷಮುಖ ಮೊಪ್ಪುತಿರಲಾಪೊರೆಯೊಳು ||
ಇಂಬುವಡೆದೈಮೊಗದ ದಶಭುಜದ ತತ್ಪುರುಷ |
ನೆಂಬ ಪುರುಷನು ತತ್ಪುರುಷಮಂತ್ರವಂ ಜಪಿಸು |
ತಂ ಬಿಡದೆ ರಂಜಿಸೆ ವಿರಾಜಿಸುತ್ತಿರ್ದಂ ತ್ರಿಯಂಬಕನು ಭಕ್ತಸಖನು ||೨೮||

ಇಂದಿರವರಲ ತಮಾಲದ ತಳಿರ ನಣ್ಗಪ್ಪಿ |
ನಂದಮಂ ಗೆಲ್ವಘೋರಾಹ್ವಯದ ವಿಪುಳಲಪ |
ನಂ ದಕ್ಷಿಣದೊಳೊಪ್ಪೆ ತದ್ವರ್ಣತನುವಘೋರನು ಪಂಚಮುಖದಾತನು ||
ಒಂದಿ ಸಾನ್ನಿಧ್ಯದೊಳಘೋರಮಂತ್ರವ ಜಪಿಸು |
ತಂ ದಿಟ್ಟಿಗೆಡ್ಡಮಾಗಿರಲು ಸೊಗಯಿಸಿದ ನಾ |
ನಂದವಿಜ್ಞಾನಮಯಮೂರ್ತಿ ಯೆನಿಸುವ ಮಹೇಶ್ವರನು ವಿಣಾಂಕಧರನು ||೨೯||

ಪಡುವಗಡೆಯೊಳು ಪೂರ್ಣಿಮೆಯ ಚಂದ್ರನಂತೆ ಚೆ |
ಲ್ವಿಡಿದ ಸದ್ಯೋಜಾತವಕ್ತ್ರ ಮೆಸೆಯಲ್ಕಿಡಂ |
ಬಡೆದಡರಿ ಸಾಮಿಪ್ಯದೊಳು ಪಂಚಮುಖದ ಸದ್ಯೋಜಾತನೆಂಬ ಪುರುಷಂ ||
ಕಡುಶೋಭೆವಡೆದು ಸದ್ಯೋಜಾತಮಂತ್ರಮಂ |
ದೃಢದಿಂದೆ ಕೀರ್ತನಂಗೆಯ್ವುತಿರ ಲೊಪ್ಪಿದನು |
ವೃಷನು ವೃಗರಾಜಚರ್ಮಾಂಬರನು ಗುಣಗಣಾಡಂಬರನು ಸೌಖ್ಯಕರನು ||೩೦||

ಸಾರಕಾಶ್ಮೀರಕುಸುಮದ ರಸದ ಪುಟವಿಟ್ಟ |
ಗೈರಿಕದ ಪುಷ್ಪರಾಗೋಪಲದ ನವಕರ್ಣಿ |
ಕಾರಪುಷ್ಪದ ವರ್ಣದುತ್ತರದ ನಿಜವಾಮದೇವಾನನದ ಹತ್ತಿರೆ ||
ಈರೈದುಬುಜದ್ಯೆಮೊಗದ ವಾಮದೇವನಾ |
ಚಾರುತರಮಂತ್ರಮಂ ಜಪಿಸುತಿರೆ ಕಮಠಪತಿ |
ಹಾರನು ಕೃತಾಂತಸಹ್ಮಾರನು ವೃಷಾಧಿಪವಿಹಾರನು ವಿರಾಜಿಸಿದನು ||೩೧||

ಧರಿಸಿ ಲೀಲಾಬ್ಜಮಂ ತೊಟ್ಟ ರತ್ನಾಭರಣ |
ಕಿರಣ ಮೆಣ್ದೆಸೆಗೆ ವಿಸಟಂಬರಿಯ ಲೋಲ್ವೈಸಿ |
ಪರಮಮಂತ್ರಾಧಿದೇವತೆಯರಿಕ್ಕೆಲದೊಳಿರೆ ಶಂಕರನ ವಾಮಾಂಗದ ||
ಸರಸಿಜಾಸನದರ್ಪದೊಳ್ನೆಲಸಿ ನೋಟಕ್ಕೆ |
ಸಿರಿಯ ನೊಡರಿಚುತಿರ್ದ್ದ ಳೀರೇಳುಜಗಮೊಡತಿ |
ಗಿರಿಜಾತೆ ಗುಹಗಣೇಶ್ವರರ ಲಾಲಿಸುತೆ ನಿಟ್ಟಿಸುತೆ ಶಾಂಭವಮೂರ್ತಿಯಂ ||೩೨||

ಸಕಲವೇದಕ್ಕೆ ತಾಯೆನಿಪ ಗಾಯತ್ರಿ ಕಾ |
ನಕಚಾಮರವ ಪಿಡಿದು ಢಾಳಿಸುತ್ತಿರೆ ಶಕ್ತಿ |
ನಿಕರದೊಳು ಮುಖ್ಯೆ ಸಾವಿತ್ರಿ ರನ್ನದ ಡವಕೆವಿಡಿದು ಸಂಮುಖದೊಳಿರಲು ||

ಬಕುತಿಯಿಂ ತೀರ್ಥಾಧಿದೇವತೆಯರುಗಳು ಪಾ |
ದುಕೆವಿಡಿದು ನಿಂದಿರಲು ವಿಭ್ರಾಜಿಸುತ್ತಿರ್ದ |
ನಕಳಂಕ ನಪ್ರತರ್ಕ್ಯನು ಶಾಂತಮಲ್ಲಿಕಾರ್ಜುನಲಿಂಗ ನಮಳಾಂಗನು ||೩೩||

ಭೃಂಗಿರಿಟಿ ತಂಡು ಮೊದಲಾದ ಗಣನಾಯಕರ |
ವಂಗಡವದೆಂಟರ್ಬುದಂ ಪ್ರಮಥರೊಡವೆರೆಸಿ |
ಮುಂಗಡೆಯೊಳಿರಲವರ ಪಿಂತೇಳುಪದ್ಮ ಗಣಕಧಿಪವಿಶ್ವಂ ನಿಂದಿರೆ ||
ಪಿಂಗವೆ ಕಿರೀಟಿಘಂಟಾಕಾಲರೆಂಬ ಗಣ |
ಪುಂಗವರು ಸಾಸಿರಗಣಂಸಹಿತ ಲಂತವರ |
ಪಿಂಗಡೆಯೊಳಿರೆ ಶೂಲಿ ಪಂಕೇಜಸಂಭವಕಪಾಲಿ ಯೊಪ್ಪುತ್ತಿರ್ದನು ||೩೪||

ಗೋಕರ್ಣಶಂಕುಕರ್ಣಂತ್ರಿಯಕ್ಷರುರುಪುಂ |
ಟಾಕರ್ಣ ಸುರಘೋಷ ಕುಂಭೋದರರು ಪರ್ವ |
ತಾಕಾರ ಸೂರ್ಯಪಾತನ ಸೋಮಪಾತನಾದಿಪ್ರಮಥಗಣ ವಗಣಿತಂ ||
ಘೂಕಶರಭೋಷ್ಟ್ರಸಿಹ್ಮವ್ಯಾಘ್ರಮುಖದ ವಿಕ |
ಟಾಕೃತಿಯ ಭೂತಗಣ ವಪರಿಮಿತ ವೋಲೈಸಿ |
ನಾಕೇಂದ್ರದಿಶೆಯೊಳಿರೆ ಸರ್ವಜ್ಞ ನೊಡ್ಡೋಲಗಂಗೊಟ್ಟು ಕುಳ್ಳಿರ್ದನು ||೩೫||

ಈರೆರಳ್ಮೊಗದೊಳಂ ದಿವ್ಯಮಂತ್ರವ ಜಪಿಸು |
ತೋರಂತೆ ಕೀರ್ತಿಸುತೆ ಬಲದೊಳಜಕೋಟಿ ಕೈ |
ವಾರಿಸುತ್ತಿರೆ ಮೂರ್ತಿಮತ್ತಾದ ವೇದಕೋಟಿಗಳುಘೇಯೆನುತ ಮಿರಲು ||
ಪಾರಾಶರಾತ್ರಿ ಮೈತ್ರೇಯಾಕ್ಷಪಾದಬೃಹ |
ದಾರಣ್ಯದೇವಲದಧೀಚಿಮಾರ್ಕಂಡೇಯ |
ನಾರದಾದ್ಯಖಿಲಯತಿತತಿ ಶ್ರುತಿಸುತಿರೆ ಪುರತ್ರಯಮಥನ ನೊಪ್ಪಿರ್ದನು ||೩೬||

ಅಸಭಾಸ್ತ್ರೀಯ ಲೋಚನಯುಗಳದಂತೆ ಪರ |
ಮೇಶನಿದಿರೊಳು ಕುಮಾರರ ಪೊರೆಯೊಳೀಳ್ಗೆವಡೆ |
ದೈಸಿರಿಗಳೋಲೈಸೆ ದಾರುಕಗಣೇಶ ರೇಣುಕಮುಖ್ಯಗಣನಾಥರು ||
ಈಶಾನಕಾಲಾಗ್ನಿರುದ್ರಕಾಲಾಂತಕಮ |
ಹಾಶಂಖಬಲನು ವಿಕರಣಬಲನು ಪ್ರಮಥಜಂ |
ಡೇಶಾದಿಗಣಸಹಿತ ಸುಜ್ಞಾನನೂಪ ರಿವಾರ್ಪರೊಪ್ಪುತ್ತಿರ್ದರು ||೩೭||

ಶ್ರೀವತ್ಸ ಕೌಸ್ತುಭಾಲಂಕೃತೋರೋಭಾಗ |
ರಾವಗಂ ಶ್ರೀಸಮನ್ವಿತ ರಮಳಧವಳರಾ |
ಜೀವಲೋಚನ ರುಟ್ಟವೊಂಬಟ್ಟೆ ವೊಳೆಯೆ ಧರಿಸಿದ ಮಕರಕುಂಡಲಾಂಕು ||
ಆವರಿಸೆ ನಿಜನಿಜಕಳೇವರವ ನೊಪ್ಪುವಿಂ |
ದೀವರಚ್ಛವಿಯ ಗೋವಿಂದಕೋಟಿಗಳಿರ್ದು |
ವಾವಿಶ್ವನಾಥನೆಡವಂಕದೊಳು ಜಪಿಸುತ್ತೆ ಶಿವನ ಸಾಸಿರನಾಮವಂ ||೩೮||

ದಂಡಧಾರಿ ಕರಂಡಪಾದಕಶಿಖಂಡಿಯಾ |
ದಂಡಿ ಪ್ರಚಂಡಬಾಹು ಪ್ರಚಂಡಕರೆಂಬ |
ಚಂಡವಿಕ್ರಮಗಣಂಗಳುಸಹಿತ ಘೋರಪಾಶುಪತಾಸ್ತ್ರ ರೂಪುವಡೆದು ||
ಮಂಡಿಸಿರೆ ಪಶ್ಚಿಮದಿಶಾಭಾಗದಲ್ಲಿ ನಿಖಿ |
ಲಾಂಡನಾಯಕನು ಶರಣೇಷ್ಟ ಫಲದಾಯಕನು |
ಖಂಡಪರಶು ಮೃಕಂಡುಸುತವರದ ನುದ್ದಂಡತಾಂಡವಪ್ರಿಯ ನೊಪ್ಪಿದಂ ||೩೯||

ದೆಸೆಯೆರೆಯರೆಣ್ಬ ರೀರಾರುಭಾಸ್ಕರ ರಷ್ಟ |
ವಸುಗ ಳೇಕಾದಶ ಮಹಾರುದ್ರರುಗಳು ಗರು |
ಡಶಿಖಾವಳಾನನರು ಕಿನ್ನರರು ಗುಹ್ಯಕರು ಚಾರಣರು ಗಾಂಧರ್ವರು ||
ಅಸಮಸಿದ್ಧರು ಸಾಧಕರು ಪಂಚಧೇನುಗಳು |
ವೃಷಭರಾಜ ಬ್ರಹ್ಮಋಷಿ ರಾಜಋಷಿ ದೇವ |
ಋಷಿಗಳುಚಿತಸ್ಥಾನದಲ್ಲಿ ರಂಜಿಸಿದರಾ ಪಶುಪತಿಸಭಾಂತರದೊಳು ||೪೦||

ನಡೆ ನಿಲ್ಲು ತೊಲಗು ಸಾಹೋ ಸಂಮುಖಾ ಎಂದು |
ಬಿಡೆ ಜಡಿವುತಿರೆ ಭೀಮಕಂಕಾಳಧರರೆಂಬ |
ಪಡಿಯರರು ಚಂಡಕೀರ್ತಿಗಳು ಸಾಕ್ಷಾದ್ಬ್ರಹ್ಮವಿದೆ ಪರಿಜುವಡೆದುದೆನುತೆ ||
ಎಡೆವಿಡದೆ ಕೊಂಡಾಡೆ ಸಿಂಹಾಸನದ ಪೊರೆಯೊ |
ಳಿಡಿಕಿರಿದು ಸಾಮೀಪ್ಯ ಸಾರೂಪ್ಯ ಪದವಿಯಂ |
ಪಡೆದ ನಾನಾಗಣೇಶ್ವರರಿರಲು ರಂಜಿಸಿತು ಮೃಡನೋಲಗದ ಮಂಟಪಂ ||೪೧||

ದೇವಾದಿದೇವನ ಸದಾಶಿವನ ಶಾಂತನ ಸ |
ಭಾವಳಯ ವಿಂತು ರಾರಾಜಿಸುವ ಸಮಯದೊಳು |
ಹಾವಭಾವ ವಿಲಾಸವಿಭ್ರಮವೆಸೆಯೆ ಮತಂಗಂ ಮೃದಂಗವ ನುಡಿಸಲು ||

ದೇವಗಾಯಕಿಯರೊಲವಿಂ ಪಾಡೆ ಭೃಂಗಿ ಮಾ |
ಯಾವಿಡಂಬವ ನಂಗಲಿಂಗ ಸಂಬಂಧದ ಮ |
ಹಾವಿಧಾನವನು ನಾಟಕವಾಗಿ ನಟಿಸುತಿರ್ದನು ಭಕ್ತಿರಸ ತುಳುಕಲು ||೪೨||

ನೋಡಿ ಭೃಂಗೀಶನಾಡಿದ ನಾಟಕವನು ಕೊಂ |
ಡಾಡಿ ಪೊರೆಯಿಟ್ಟು ಮನ್ನಿಸಿ ಬಳಿಕ ಬಾಂದೊರೆಯ |
ಸೂಡಿದಂ ಪ್ರಮಥನಿಕರದೊಳಗ್ರಗಣ್ಯನಂ ರೇಣುಕಗಣಾಧೀಶನಂ ||
ನಾಡೆ ಕಾರುಣ್ಯದೃಷ್ಟಿಯಲಿ ನಿಟ್ಟಿಸಿ ಕರೆದು |
ನೀಡಿ ಪರಮ ಪ್ರಸಾದವನು ಧರಣಿಯೊಳುಂಟು |
ಮಾಡು ನೀನೀಯಂಗಲಿಂಗಸಂಬಂಧವನೆನುತ್ತೆ ಮತ್ತಿಂತೆಂದನು ||೪೩||

ತೆಲುಗುದೇಶದ ಕೊಲ್ಲಿಪಾಕಿಯೆಂದೆಂಬ ಪೊಳ |
ಲೊಳಗೆ ಶಿವಲಿಂಗದಿಂ ಸಂಭವಿಸಿ ಯರಿವಂತೆ |
ವೊಲು ಸಪ್ತಶತವತ್ಸರಾಂತ ಮರಿಯದತೆರದೊಳೇಳ್ನೂರುವರ್ಷಂಬರಂ ||
ಇಳೆಯೊಳಿರ್ದಿಲ್ಲಿಗೆಳ್ತಪ್ಪುದೆಂದನುವದಿಸಿ |
ಕಳುಹಿದಂ ರೇಣುಕಪ್ರಮಥಾಧಿಪತಿಯ ನ |
ಗ್ಗಳವೈಮೆಗಾಣ್ಮನಾ ಪೂರ್ಯೆದು ಕಣ್ಮರಲ ಗುರುಶಾಂತಮಲ್ಲೇಶನು ||೪೪||

ಶಾಂತಮಲ್ಲೇಶ್ವರಂಗಭಿನಮಿಸಿ ಬೀಳ್ಕೊಂಡು |
ಶಾಂತರಸರೂಪನಾರೇಣುಕಗಣೇಶ ನ |
ತ್ಯಂತ ಕರುಣಾಂಬುನಿಧಿ ಶಿವಲೋಕದಿಂದಿಳಿದು ಮುಂತಣೀಶ್ವರಲೋಕವಂ ||
ಪಿಂತಿಕ್ಕಿ ರುದ್ರಲೋಕಂ ವಿಷ್ಣುಲೋಕಮೆಂ |
ಬಿಂತಿವಂ ಕಳೆದನಿಲಪಾಶಹಸ್ತನ ಜಗ |
ತ್ಸಂತತಿ ನಿರಂತರಾಧಾರನಂ ಶಿಂಶುಮಾರನ ನೋಡುತ್ತೈತಂದನು ||೪೫||

ಆಶಿಂಶುಮಾರನಿಹ ತಾಣಮಂ ದಾಂಟಿ ಕಮ |
ಲಾಸನನ ಲೋಕವ ತಪೋಲೋಕಮಂ ಸಮು |
ದ್ಭಾಸಿಪ ಜನರ್ಲೋಕಮಂ ಮಹರ್ಲೋಕಮಂ ಸ್ವರ್ಗಲೋಕವನು ಮೀರಿ ||
ಈಶನಿಂ ನಿತ್ಯತ್ವಮಂ ಪಡೆದ ಧ್ರುವ ಧಾರಿ |
ಣೀಶಸಿರ್ದೆಡೆಗೆ ಬಂದಂತದಂ ನೋಡುತೆ ಮ |
ಹಾಸಪ್ತಋಷಿಗಳಾವಾಸಕೆಲ್ತಂದ ನಾಗಣಕುಲಾಂಬುಧಿಚಂದ್ರನು ||೪೬||

ಅದನು ಲಂಘಿಸಿ ಭುವರ್ಲೋಕದೊಳಗಿಹ ವಿಧುಂ |
ತುದಕೇತುಶನಿಬೃಹಸ್ಪತಿಮಹೀಜಾತರಾ |
ಸ್ಪದಡೆಯ ಶುಕ್ರನಾಲಯವ ಬುಧನಿಳಯವನು ನಕ್ಷತ್ರಮಂಡಲವನು ||
ಬಿದುವಿನಾದಿತ್ಯನ ನಿತಾಂತಂಗಳಂ ಕಳೆದು |
ಮುದದೆ ನಡೆತಂದು ಭೂಲೋಕಮಂ ಸಾರ್ದನ |
ಗ್ಗದ ರೇಣುಕಪ್ರಮಥರಾಜ ನಾನತಕಲ್ಪಭೂಜ ನುನ್ನತತೇಜನು ||೪೭||

ಶಾಂತಮಲ್ಲೇಶ್ವರಶಿವಾನುಸಂಧಾನವಿಷು |
ಲಾಂತರಂಗನ ಬಾಲಸಿದ್ಧಯೋಗೀಂದ್ರನ ನಿ |
ಶಾಂತಕರುಣಾಪಾಂಗಬಲದಿ ನಾಂ ಪೊಗಳ್ದ ಸಿದ್ಧೇಶ್ವರಪುರಾಣದೊಳಗೆ ||
ಕಂತುಮಥನನು ವೀರಶೈವವಂ ಪಸರಿಸು ಧ |
ರಾಂತರಾಳದೊಳೆಂದು ರೇಣುಕಗಣೇಶ್ವರನ |
ಸಂತಸದೆ ಬೀಳ್ಕೊಟ್ಟ ಕಥನವಿದು ಸುಜನರಾಲಿಸುವು ದೆರಡನೆಯಸಂಧಿ ||೪೮||

## ೨ ನೆಯ ಸಂಧಿ ಮುಗಿದುದು.

———— ✠ ————

ಶ್ರೀಗುರುಪರಬ್ರಹ್ಮಣೆ ನಮಃ.

## ೩ ನೆಯ ಸಂಧಿಯು.



ಸೂ|| ಧರಣಿಯೊಳು ಕೀರ್ತಿಯಂ ಪಡೆದಾಂಧ್ರದೇಶದೊಳು |
ಮೆರೆವ ಘಟಿಕಾಸ್ಥಾನಕೊಲ್ಲಿಪಾಕಿಯೊ ಳಿಂದು |
ಧರಸೋಮನಾಥಲಿಂಗದೊಳುದಯವಾದನಾ ರೇವಣಾಸಿದ್ಧೇಶನು ||

ವಿಶ್ವಂಭರಾಜಲಾನಲಪವನಗಗನಹರಿ |
ದಶ್ವಾಮೃತಾಂಶುಯಜಮಾನಾಸ್ಪದಾಂಗ ಪರ |
ಮೈಶ್ವರ್ಯಭೋಗಪ್ರದಾಯಕ ರತೀಶಭುಜಗರ್ವಸರ್ವಸ್ವಾಪಹಾ ||
ವಿಶ್ವೇಶ ನಿತ್ಯಪ್ರಸನ್ನ ನಿರುಪಮಕಂಬ |
ಶಾಶ್ವತರಗೀತಸಂಪ್ರೀತ ಮುಕ್ತಾಫಳನಿ |
ಭಶ್ವೇತವರ್ಣಪ್ರಭಾಮೂರ್ತಿ ಜಯ ಶಾಂತಮಲ್ಲಿಕಾರ್ಜುನ ಮಹೇಶಾ ||೧||

ಕಲಿಯುಗಪ್ರಥಮಪಾದದೊ ಳಾಂಧ್ರದೇಶದೆಡೆ |
ಯೊಳು ಕೊಲ್ಲಿಪಾಕಿಯೊಳು ಸೋಮೇಶಶಿವಲಿಂಗ |
ದೊಳಗಣಿಂದವತರಿಸಿ ವಜ್ರಕುಂಡಲಕನಕಕೌಪೀನಕಂಥೆವೆರಸಿ ||
ಮಲಯಾದ್ರಿಗೆಳ್ತಂದಗಸ್ತ್ಯಮುನಿನಾಥಂಗೆ |
ಸಲಹಿ ಶಿವತತ್ವೋಪದೇಶಮಂ ರಾಜಿಸುವ |
ಸುಳುಹು ಪಾವನಮೂರ್ತಿ ರೇವಣಾಸಿದ್ಧೇಶ ನಿಷ್ಟಫಲವೀಗೆ ನಮಗೆ ||೨||

ಶ್ರೀರೇಣುಕಪ್ರಮಥರಾಜನುದಯದ ಕಥಾ |
ಸಾರಮೆಂತೆನೆ ಸಂಚಲನ್ನೀಲಪರ್ವತಾ |
ಕಾರಕಲಿತಾಭ್ರಂಕಷೋಲ್ಲೋಲಕಲ್ಲೋಲಜಲಜಾಲನಿರ್ಘೋಷದಿಂದೆ ||
ಸಾರಮುಕ್ತಾಗರ್ಭಶುಕ್ತಿಕಾವಿದ್ರುಮಲ |
ಶಾರುಚಿರಮಣಿನಿಚಯದಿಂದ ಲತ್ಯಧಿಕವಿ |
ಸ್ತಾರಗಾಂಭೀರ್ಯನಿಧಿಯೆನಿಪ ಕಾಳೋದಕದ ವಾರಾತಿ ಕಂಗೆಸೆದುದು ||೩||

ಶರಧಿಯೆ ಸರಸಿ ತಾವರೆ ಯುರ್ವಿ ನಿಖಿಲಕುಲ |
ಗಿರಿಯೆ ನಿಟ್ಟೆಸಳಾಗೆ ರಂಜಿಸಿಪ್ಪುದು ಮೇರು |
ಧರಣೀಧರಂ ಕರ್ಣಿಕಾಕೃತಿಯೊಳದರ ದಕ್ಷಿಣದೀಶಾಭಾಗದಲ್ಲಿ ||
ಕರಮೊಪ್ಪುತಿರ್ಪ್ಪರು ಕಳಿಂಗವಂಗಾಂಗಗು |
ರ್ಜರಪಾರಿಯಾತ್ರಾದಿದೇಶಸಂಚಯದೊಳಗೆ |
ಪರಿಶೋಭಿಸಿತ್ತಾಂಧ್ರದೇಶ ಶಿವಧರ್ಮದ ನಿವೇಶ ಸುಗುಣಪ್ರಕಾಶ ||೪||

ಪಳಿಯುಂಟು ವಸ್ತ್ರಭೇದನದೊ ಳವಿಚಾರತ್ವ |
ದಳವಡಿಕೆಯುಂಟು ಮೃಗಕುಲದೊಳೀಕ್ಷಿಪೊಡೆ ಕಾ |
ಲ್ಗಳೆವುದುಂಟಚ್ಚಶಿರಪಚ್ಚೆಯೊಳು ಕೊರೆಯೆಂಬುದುಂಟಖಿಳಧಾನ್ಯಂಗಳ ||
ಒಳಗೆ ಪೊಡೆಯೆಂಬ ಮಾತುಂಟು ಬೆಳೆಗೈಗಳೆಡೆ |
ಯೊಳಗಲ್ಲ ದುಳಿದೆಡೆಯೊಳಿಲ್ಲೆಂಬ ಮೈಮೆಯಂ |
ತಳೆದೊಪ್ಪುವಂತಾ ತ್ರಿಲಿಂಗದೇಶವನು ಬಣ್ಣಿಸುಬಲ್ಲ ರಾರಿಯೊಳು ||೫||

ಪುರವಗ್ರಹಾರ ದೇವಸ್ಥಾನ ವಾರಾಮ |
ವರವಟಿಗೆ ಯನ್ನಸತ್ರಸ್ಥಲಂ ಪುದದಿ ಕೆರೆ |
ತೊರೆ ಕಟ್ಟೆ ಕಾಲ್ವೆ ಹೊಕ್ಕರಣೆ ಪೆರ್ಮಡು ಸೆಂಚೆಯೆಂಬಿವರ ತಂಡದಿಂದೆ ||

ಪರಿಶೋಭಿಸುತ್ತಿರ್ಪುದಾದೇಶ ನಿರ್ಭಯದಿ |
ಚರಿಸುತಿಹ ಪಾಂಥರ್ಕಳಿಂದೆ ಪಲತೆರದ ಬೆಳೆ |
ಸಿರಿಯಿಂದೆ ನಗರನಿಗಮಗ್ರಾಮಖರ್ವಟಮಡಂಬ ಸಂದೋಹದಿಂದೆ ||೬||

ಇನಿದಿಡಿದ ಪಾಮರನ ತನಿವಣ್ಣ ಧಾರೆ ಸೋ |
ರ್ದನುದಿನಂ ಮಡುಗಟ್ಟಿ ತವೆ ಪೆರ್ಚಿ ಭೋರೆಂದು |
ಪೊನಲಾಗಿ ಪರಿಯಲಾರಸದೆ ಬಳೆದಮಳಪುಂಡ್ರೇಕ್ಷುಸಾರದೊಳೊಂದಿದ ||
ಘನತರವಿಭಿನ್ನ ದಾಡಿಮ ಫಳರಸದ ಕಾಲ್ಗ |
ಳಿನಸು ಮೆಣ್ದಿಸೆಗೆ ಪರಿದ್ಯೈದಿ ಬೆಳಸಿದುವೊ ನಿಜ |
ವೆನಲೆಸೆವ ಗಂಧಶಾಲಿಯ ವನಂ ಜನದ ಸಂಜೀವನಂ ಸೊಗಯಿಸಿದುದು ||೭||

ಕೊನೆದೆನೆಯನಡರ್ದು ಚಂಚುವಿನಿಂ ಕದ್ರುಂಕಿ ಭೋಂ |
ಕನೆ ಪೊದಳ್ದೊರೆವ ಪಾಲ್ವನಿಗಳಂ ಸವಿದು ಸುಂ |
ಮನದಿ ನಿಕ್ಕೆಲದೊಳಂ ನೆಗೆದ ಗಿಳಿವಿಂಡು ಗಗನಶ್ರೀಯ ನುಣ್ಗೊರಲೊಳು ||
ಮಿನುಗುವಂಬುಜರಾಗರತ್ನವೆಡೆವಡೆದ ನೂ |
ತನ ಹರಿನ್ಮಾಣಿಕ್ಯಮಾಲೆಯೆಂಬಂದಮಂ |
ನೆನೆಯಿಸಲು ಪಸುರ್ವಡೆದು ಬೆಳೆದ ಕಮ್ಮಂಗಳವೆ ಕಂಗೊಳಿಸುತಿರ್ಪುವಲ್ಲಿ ||೮||

ಪಾಲ್ವಿಡಿದ ಗಂಧಶಾಳಿಯ ಗದ್ದೆಗೆರಪ ಗಿಳಿ |
ಸಾಲ್ವಿತತಭೀತಿಯಿಂ ಬೆಚ್ಚಿ ನೆಗೆಗೆಟ್ಟು ಜಾ |
ರಲ್ವೇಳ್ಕುಮೆಂದು ಚೆನ್ನೈದಿಲಿಂದಿಟ್ಟು ತೆವರುವ ಪಾಮರಸ್ತ್ರೀಯರ ||
ಜೋಲ್ವ ನಿಡುಮುಡಿಗಳಿಂದಲ್ಲೊಕ್ಕು ಪಸರಿಸಿದ |
ರಲ್ವಿಂಡ ಸುಂದೈದೆ ಸೊಕ್ಕಿದಾರಡಿಯ ಬಂ |
ಬಲ್ವಿರಾಜಿಸುತಿರ್ಪುದಾ ಪೊಡವಿವೆಣ್ಣಿಟ್ಟ ಕತ್ತುರಿಯ ಬೊಟ್ಟಿನಂತೆ ||೯||

ಕಳಮವನಪಜ್ತಿ ಯಿತೆರದಿ ನೊಪ್ಪುವುದದರ |
ಬಳಿಯೊಳಂಬುಜಕುಮುದ ಕಲ್ಹಾರತತಿಯಿಂದೆ |
ಕೊಳರ್ವಕ್ಕಿಯರಸಂಚೆ ಪೊಣರ್ವಕ್ಕಿ ಜೊನ್ನವಕ್ಕಿಗಳ ಮಿಥುನಂಗಳಿಂದೆ ||
ಕುಳಿರ್ಗಲ್ಲ ಸೋಪಾನದಿಂದೆಸೆಯೆ ತಿಳಿಗೊಳಂ |
ಗಳ ಚಯಂ ತತ್ಸಮೀಪದೊಳು ತೆಂಗಡಕೆ ನೇ |
ರಿಲುಪಸಲು ಮೊದಲಾದನೇಕ ವೃಕ್ಷಂಗಳಿಂದುಪವನಂ ಬಗೆಗೊಳಿಪುದು ||೧೦||

ಬೆಳರ್ವಣ್ಣವಿಡಿಕಿರಿದು ಕುಡಿವರಿದು ಬೆಳೆದೊಪ್ಪ |
ವೆಲೆವಳ್ಳಿ ಪರ್ವಿದೆಳೆಗೌಂಗುಗಳ ವಂಗಡದ |
ತಳದ ಕಪ್ಪುರವಾಳೆಗಳ ಪೊರೆಯೊಳುದಿರ್ದ ಘನಸಾರದ ಪರಾಗಂಗಳಂ ||
ತಳೆದ ಪಾಮರವಧೂಟಿಯರ ಗಾನದ ರಸವ |
ನಳವಡಿಸಿಕೊಂಡೊಯ್ಯನೊಯ್ಯ ನೆಯ್ದುವುದು ತಂ |
ಬೆಲರಲ್ಲಿ ಶೈತ್ಯಸೌರಭ್ಯಮಾಂದ್ಯಂಗಳೆಂಬೀ ಗುಣತ್ರಯವ ತಾಳ್ದು ||೧೧||

ಪರಿವಿಡಿಯೊಳಿಂತೊಪ್ಪೆ ಕಳಮವನ ಮುಪವನಂ |
ಮೆರೆವ ಪುಂಡ್ರೇಕ್ಷುವನ ಮಲರ್ದೋಂಟ ವಿಕ್ಕೆಲದೊ |
ಳಿರಲು ನೆಲವೆಣ್ಣ ಬೈತಲೆಯ ರೇಖೆಯ ಪೋಲ್ವ ಪಥದೆಡೆಯೊಳಲ್ಲಲ್ಲಿಗೆ ||
ಪರಿಮಳಿಪ ಲಾಮಂಚ ಬಲ್ಲಾಳದಟ್ಟಿಯಿಂ |
ವಿರಚಿಸಿದ ಪಾನೀಯಶಾಲೆ ಪನ್ನೀರ್ಪುರ್ವಿದಿದು |
ಪರಿವಡೆದು ಪಳಕುಗಲ್ಲುಗಳ ಸಾಲ್ಗಳಿಂದೆ ಪೊಂಗರಗಂಗಳಿಂದೆಸೆವುದು ||೧೨||

ಮೈಗಂಪು ಮರಿದುಂಬಿವಿಂಡಿಂಗೆ ಕಡುಸವಿಯ |
ಸೈಗರೆಯು ಲಸುಕೆದಳಿರಂದನುಂ ಮಿಾರಿದಂ |
ಗೈಗೆಂಪು ಪಿಡಿದ ಶಶಿಕಾಂತಕಳಶಮ ನಚ್ಚ ಮಾಣಿಕದ ಕಲಶಮೆನಲು ||
ಕೈಗೆಯ್ಯ ಲರವಟಿಗೆವನೆಗಳೊಳು ಜವ್ವನೆಯ |
ರೈಗಣೆಯ ನೀಲೋಕವೆಲ್ಲಮಂ ಮೋಹನಂ |
ಗೈಗೆಂದು ಬೈತ ಜೆಲ್ವ ನಿಧಾನಮೆಂದೆಂಬವೊಲು ಸೊಗಯಿಸುತ್ತಿರ್ಪ್ಪರು ||೧೩||

ತೃಷೆಯಿಲ್ಲದಿರ್ದೊಡಂ ಪಥಿಕರಂತವರ ನಿ |
ಟ್ಟಿಸುವಾಸೆಯಿಂದೆ ನಡೆದರವಟಿಗೆವನಗೆ ಬರ |
ವಸದಿ ಬಂದಲ್ಲಿ ಕುಳ್ಳಿರ್ದು ಕೈಯೊಡ್ಡಿ ವಿಮಳೋದಕಮನೀಂಟುತಿರಲು ||
ಒಸೆದರೆವರವರ್ಗೆ ಸರಿವಿಂಡಿಯರು ಮೇಲುದಿನ |
ವಸನಮೋಸರಿಸೆ ಕಾಣಿಸಲು ನೆಲೆಮೊಲೆ ಮಿಸುಪ |
ಮಿಸುನಿದಾವರೆಯ ಮುಗುಳಂತೆ ನಳಿತೋಳ ಕೋಮಳತೆ ಕಣ್ಗೆಸಿದಾದುದು ||೧೪||

ಪಾನೀಯಶಾಲೆಗಳ ಪಙ್ಕ್ತಿಯಿಂತಿಡಿಕಿರಿದ |
ನಾನಾನಿತಂಬಿನಿಯರಿಂ ವಿರಾಜಿಸಿ ತೋರ್ಪು |
ದಾನಾಡು ಸಿರಿಯ ನೆಲೆವೀಡು ವೈಭವದ ಪೊಂಪುಳಿ ಸಕಲಸುಖದೊಬ್ಬುಳಿ ||

ದಾನಿಗಳ ಧರ್ಮಿಗಳ ಭೋಗಿಗಳ ಪರಶಿವ |
ಧ್ಯಾನಿಗಳ ಜ್ಞಾನಿಗಳ ಗಡಣದಿಂದಂ ಧರಿ |
ತ್ರೀನಾರಿ ತಳೆದ ಮಣಿಮಯದ್ಧೈರಡಾಲಿಯಂತಧಿಕಸೌಭಾಗ್ಯದಿಂದೆ ||೧೫||

ಆರಾಜ್ಯಮಧ್ಯದೊಳ್ಸೇತುರಾಮೇಶ್ವರಂ |
ವಾರಾಣಸೀಪುರಂ ಕಾಂಚೀಮಹಾನಗರಿ |
ಸೌರಾಷ್ಟ್ರ ವರುಣಗಿರಿ ತಿರುಕಾಳಹಸ್ತಿ ಕೇದಾರ ಮಂದರಪರ್ವತ ||
ತಾರಾದ್ರಿ ಮುಖ್ಯವಾದಗಣಿತ ಶಿವಕ್ಷೇತ್ರ |
ದೋರಣದೊಳತುಳವೆಂದೆನಿಪ ಜಸವುಂಪೆತ್ತು |
ರಾರಾಜಿಪುದು ಕೊಲ್ಲಿಪಾಕಿಯೆಂದೆಂಬ ಪುರಿ ನಿಜವಿಭವಜಿತ ಸುರಪುರಿ ||೧೬||

ಪರಿವೇಷ್ಟಿಸಿದ್ದಾರ್ಗಗರಂಗಳಿಂ ಸಾಲ್ಗೊಂಡ |
ಕೆರೆತೊರೆಗಳೆಡೆಯೊಳುರೆ ಬೆಳೆದಿರ್ದ ಪುಸ್ಪಮುಂ |
ಜರಿ ಬಳ್ಳಿಮಲ್ಲಿಗೆ ಮನಃಪ್ರಿಯ್ಯಕೊನೆವಾಳೆ ರಾಜಾನ್ನಗಂಧಶಾಳಿ ||
ಕರಿಯಕೇಸರಿ ಬಿಳಿಯಕೇಸರಿಯೆನಿಪ್ಪ ಪರಿ |
ಪರಿಯ ಗದ್ದೆಗಳಿರದೆ ಶೋಭಿಪುದು ತನ್ಮಹಾ |
ಪುರವರಾಂಗನೆಯ ನೂಪುರ ಚತುರ್ದಶಭುವನವಿಲಸಿತ ಮಹಾಗೋಪುರ ||೧೭||

ಶೈಲಜಾಪತಿ ಸೋಮನಾಥನರ್ಚನೆಗೆ ಪಾ |
ತಾಳದಿಂ ಫಣಿವಧುಗಳ್ಕೈತಂದ ಬಟ್ಟೆ ತಾ |
ನೋ ಲಲಿತಸೃಷ್ಟಿಸಮುದ್ರದೊಳು ಬದಿ ಯಲ್ಲಿ ನೆಲನಂ ನಿರ್ಮಿಸಲ್ಕರೆದನೊ ||
ಪಾಲುಗಡಲಿದು ಸ್ವೈಪುವಾಣಿವೆಂದೇ ಬಳಸಿ |
ತೋ ಲೀಲೆವಡೆದೆನಲ್ಕುಂಪೆಸಿಂ ವಿಮಳಕೀ |
ಲಾಲಪೂರ್ಣಂ ನೆಗಳ್ತೆಯ ಸಾಲ್ದಗಳ್ತೋರ್ಪು ದವನಿಗಚ್ಚರಿಯೆಂದೆನೆ ||೧೮||

ಸೋಮೇಶನೆನಿಸಿಕೊಂಡೆನ್ನ ಸುಕ್ಷೆಯುಂ ಧಾರಿ |
ಣೀಮಧ್ಯದೊಳ್ಪ್ರಕಾಶದಿ ನುಂಟುಮಾಡಿದೆಡೆ |
ಯೀಮಹಾಕ್ಷೇತ್ರ ವಿದನಾಂ ಸುತ್ತುವರ ಲೀಕ್ಷಿಸುವೆನು ನಲವಿಂದೆಸುತ್ತಿ ||
ಹೈಮಾಚಲಂ ಬಂದು ಬಳಸಿ ನೆಲಸಿರ್ದ ಪಾಂ |
ಗೋ ಮಹಾದೇವೆನಲು ಬೆಳ್ಪಿಡಿದ ನಿರ್ಮಳಶಿ |
ಲಾಮಯಪ್ರಾಕಾರ ಪುರಲಕ್ಷ್ಮಿಮಿಟ್ಟೆಕ್ಕಸರದಂತಿರೊಪ್ಪಿರ್ದುದು ||೧೯||

ಆರುಚಿರದುಪಲಕೋಟಾವಳಯದೊಳಗೆ ಧವ |
ಳಾರಭುವನೇಶ್ವರಂಗಳ ಭದ್ರಮಂಟಪದ |
ಸೇರುವೆಗಳಿಂ ರತ್ನಕನಕ ಪರಿಮಳವಸ್ತು ವಸ್ತ್ರತಾಂಬೂಲಮುಖ್ಯ ||
ಸಾರ ವಿವಿಧದ್ರವ್ಯದಂಗಡಿಯ ಗಡಣದಿಂ |
ರಾರಾಜಿಪುದು ಕೊಲ್ಲಿಪಾಕಿಯೆಂದೆಂಬ ಪೊಳ |
ಲೋರಂತೆ ಶಿವತೀರ್ಥನಿವಹದಿಂ ದಿವ್ಯಲಿಂಗಂಗಳಿಂ ಸೊಂಪುವಡೆದು ||೨೦||

ಎಲರ್ವಟ್ಟೆಗುಪ್ಪರಿಪ ಧೂಪಧೂಮದ ಬಿಡದೆ |
ಜಲಧಾರೆಯಿಂ ದೊಸರುವಭಿಷೇಕದುಗ್ಧರುಚಿ |
ಗೆಳಸಿ ಬಳಸಿದ ದೀಹದಂಜೆಗಳ ಸಂದಣಿಯ ಮೊರೆವ ಬಹುವಾದ್ಯದುಲುಹ ||
ಮೊಳಗೆಂದು ಕುಣಿಯುವೆಳೆನವಿಲ್ಗಳೊಗ್ಗಿನ ಸೊಂಪು |
ದಳೆದೊಪ್ಪುತಿಹುದಚ್ಚಪೊಸಪೊನ್ನ ಮಿಸುಪದೇ |
ಗುಲ ಭಜಕಜನದಿಷ್ಟಫಲವೀವ ವಿಶ್ರುತಸ್ಥಲ ಕುಲಿಶಕಲಶೋಜ್ವಲ ||೨೧||

ಜ್ಯೋತಿಯೊಳು ಬೆಳಗು ಭಕ್ತಿಯೊಳು ವಿಶ್ವಾಸ ವಿ |
ಖ್ಯಾತಿಯೊಳುದಾರಗುಣ ವರಿವಿನೊಳು ಕೈವಲ್ಯ |
ನೀತಿಯೊಳು ಪರಿಶೋಷವೆಂತಿರ್ಪುದಂತಿರಾಮಿಸುನಿಯ ಶಿವಾಲಯದೊಳು ||
ರೀತಿ ಶೋಭಿಸ ಲೆಡಂಬಡೆದು ವಿಭ್ರಾಜಿಪ ನ |
ಜಾತ ನಾಮ್ನಾಯಕ್ಕತೀತ ನಗಜಾಮನಃ |
ಪ್ರೀತ ನವನತಪಾರಿಜಾತ ನಸದೃಶ ಸೋಮನಾಥ ನತುಳಖ್ಯಾತನು ||೨೨||

ಆಮಹಾ ಶಿವಲಿಂಗಸೇವೆಗತಿಶಯ ಮಹಾ |
ಪ್ರೇಮದಿಂದೆಂದಿನಂತಂದು ಶಿವಭೂಸುರ |
ಸ್ತೋಮವೈತಂದಾಗಮೋಕ್ತದಿಂ ದಭಿಷೇಕ ಮುಖ್ಯೋಪಚಾರಚಯದ ||
ನೇಮವಂ ರಚಿಸಲಾವೇಳೆಯೊಳು ಕನಕಕಹ |
ಳಾಮಂಡಲಂ ಸಕಲದೇವಸಂಕುಳ ಸಾರ್ವ |
ಭೌಮ ನೊಡ್ಡೋಲಗದ ಸಮಯವೆಂದರುಹಿದುದು ದೆಸೆಗಳೆಂಟುಂ ಘುಮ್ಮೆಡೆ ||೨೩||

ಪೆಸರ್ವಡೆದ ರಾಜಪುತ್ರರು ಚತುರ್ವೇದಾರ್ಥ |
ವಿಸರಕೋವಿದರು ವೈಶ್ಯಾಗ್ರಗಣ್ಯರು ವಿರಾ |
ಜಿಸುತಿಹ ಮಹಾಪ್ರಭುಗಳಾಗಮಜ್ಞರು ಪುರಾಣಿಕ ರಖಿಳಶಾಸ್ತ್ರಜ್ಞರು ||

ರಸಿಕಕವಿಗಳು ಗಮಕಿವಾಗ್ಮಿಗಳು ಮು |
ಖ್ಯಸಮಸ್ತಜನ ಬಂದು ಸಾಷ್ಟಾಂಗದಿಂದೆ ವಂ |
ದಿಸಿ ತಾಣವರಿದು ಕುಳ್ಳಿರ್ದೋಲಗಿಸುತಿರ್ದರಸಮಾಕ್ಷಸೋಮೇಶನ ||೨೪||

ಯತಿಗಳತ್ಯಂತಸದ್ವ್ರತಿಗಳಗ್ಗದವಾಶು |
ಪತಿಗಳಷ್ಟಾಂಗಯೋಗಪ್ರಾಜ್ಞರಾದಿಯಾ |
ದತುಳಶಿವಶರಣಸಂತತಿ ಬಂದು ಮೈಯ್ಯಿಕ್ಕಿ ಸೋಮೇಶನಭಿಮುಖದೊಳು ||
ತುತಿಸುತಿರಲಾವೇಳೆಯಲ್ಲಿ ಬಂದರು ಜಗ |
ತ್ರಿತಯಮೋಹನಕಾರಿಯರು ವಾರನಾರಿಯರು |
ವಿತತಸಂಗೀತಸಾಹಿತ್ಯ ಕೋವಿದೆಯರುನ್ನತರತಿಕಳಾವಿದೆಯರು ||೨೫||

ಉಟ್ಟಚೀನಾಂಬರದ ಮೇಲುದಿನದಿಂದುಣ್ಮಿ |
ಬಟ್ಟಮೊಲೆಗಳ ಥಾಳವಳವಡಲು ಕೊರಲೊಳಿಳಿ |
ವಿಟ್ಟ ಪೆರ್ಮುತ್ತಿನೇಕಾವಳಿಯ ಮೊಕ್ಕಳದ ನುಣ್ಬೆಳಗ ನೋಡೆಯಿಂದೆ ||
ಇಟ್ಟ ಪಜ್ಜೆಯ ಗತಿಯ ಕಂಡು ರಾಂಜೆಗಳ |
ಥಟ್ಟು ಬೆಂಬಳಿವಿಡಿದು ಬರಲು ನೆರೆ ಜಾಣ್ಮೆಯಳ |
ವಟ್ಟ ಪೊಸಜವ್ವನೆಯರೆಯ್ತಂದ ರೋಲೈಸಲೆಂದು ಗೌರೀರಮಣನಂ ||೨೬||

ತಳಿತ ಪುಡಿಗತ್ತುರಿಯ ರಜದ ರವೆ ತೋರಮುಡಿ |
ಗಳಿನೊಕ್ಕು ಕುಚತಟದ ಕುಂಕುಮದ ಪಂಕವೊಸ |
ರ್ದಿಳಿದು ಕೆನ್ನೆಯೊಳಿಟ್ಟ ಪೊಂಗೇದಗೆಯ ಕಿರಿಯ ಗರಿಗಳಿಂ ಪೈಸರಿಸಿದ ||
ಅಲರ್ವುಡಿಗಳಿಂದಂದು ನಡೆತರ್ಪ ಬೀದಿಯು |
ಜ್ಜ್ವಲಿಪ ವರ್ಣತ್ರಯದ ರಂಗವಲಿ ಯಿಟ್ಟಂತೆ |
ಚೆಲುವಾಗೆ ತುಂಬಿದೆಳೆವರೆಯದ ನಿತಂಬಿನಿಯು ರೇಲ್ತಂದ ರಭವನೆಡೆಗೆ ||೨೭||

ಕಾರಮಿಂಚಂ ಕರಗಿಪುದನರುದು ತೊಡೆದು ಸಿತ |
ನೀರರುಹದೆಸಳ್ಗೆ ವಿಭ್ರಮವಿಲಾಸಂಗಳಂ |
ಸೇರಿಸಿ ಬೆಡಂಗು ಮಿಗಲಿವರ ಸೃಷ್ಟಿಸುವ ಪದ್ಮದಲ್ಲಿ ಕಣ್ಮಲರ್ಗಳಾಗಿ ||
ವಾರಿಜೋದ್ಭವನು ನಿರ್ಮಿಸಿದ ನಹುದೆನಿಸುವವಿ |
ಚಾರಕ್ಕೆ ಪಕ್ಕಾದ ಕರ್ಣಾಂತಲೋಚನದ |
ವಾರಕಾಂತೆಯ ರಧಿಕಸೌಭಾಗ್ಯವಂತೆಯರು ಶಿವನೋಲಗಕೆ ಬಂದರು ||೨೮||

ನೋಡಿದ ಜನಂ ಭ್ರಾಂತಿಗೊಳಗಾಗಬೇಕೆಂದು |
ನಾಡೆ ಚದುರಿಂ ಕಾಮನೆಂಬ ನಾಲ್ಮೊಗನು ಲೀ |
ಲಾಡಂಬರದೊಳು ಸನ್ಮೋಹನದ ಮುದ್ದೆಯಂ ಮಾಡಿ ಲಾವಣ್ಯರಸದಿಂ ||
ಕೂಡೆ ನುಣ್ಣಿಸಿ ನಿಮಿರ್ಚಿದನೊ ನಿಜವೆಂಬ ಬಗೆ |
ಗೀಡಾದ ವೃತ್ತಪೀನೋತ್ತುಂಗಕುಚಯುಗದ |
ಗಾಡಿಕಾತಿಯರು ಬಂದರು ಚಂದ್ರಧರನ ಮಣಿಮಾಡದೆಡೆಗಳ್ತಿಯಿಂದೆ ||೨೯||

ನೇತ್ರಂಗಳಂಗಜನ ಸತಿ ಯಮರ್ಚಿದ ಕರ್ಣ |
ಪತ್ರಂಗಳಿಸಕಮಂ ಪೆರ್ಚಿಸಿ ನಿರಂತರವಿ |
ಚಿತ್ರಗಳಂ ಧಾರೆಗೆ ಸಾರ್ಚುತಿರೆ ಕಾಂತಿಯಿಂ ಕೋಮಲತ್ವದಿ ನೊಪ್ಪುವ ||
ಗಾತ್ರಂಗ ಳಭಿನವಸುವರ್ಣಚಂಪಕಕುಸುಮ |
ಪತ್ರಂಗಳಂತೆ ರಾಜಿಸಿ ಬಂದರೊಗ್ಗಿಂ ಜ |
ಗತ್ರಯಾಧೀಶ್ವರನ ಶಂಭುಸೋಮೇಶ್ವರನ ಭವನಕೆ ವಿಲಾಸಿನಿಯರು ||೩೦||

ಕಣ್ಣೇವಿ ನೋಡೆ ಪೊಸಜವ್ವನಂ ರಸೆದಾಳಿ |
ಪಣ್ಣುದಂತೊಪ್ಪುತಿರೆ ಮೃದುಮಧುರ ಕಿಂಬಾಗಿ |
ಜಾಣ್ಣುರುಗಿದೊಳ್ನುಡಿಗಳಾಲಿ ನೊಡೆಂಚೆದುಪ್ಪಳೆ ಕಿವಿಗೆ ಪೊಸೆದವೊಲಿರೆ ||
ನಾಣ್ಣೆಕ್ಕನುಣ್ಣೆ ಶೃಂಗಾರಚೇಷ್ಟೆಯೊಳು ಬೆಲೆ |
ವೆಣ್ಣಂಡ ವೆಸ್ತುಂದುದೀಶನೋಲಗಕೆ ವೊರ |
ಪೊಸ್ತೋಲದಂತೆ ಕಾಮುಕರ ನೆದೆಗುಂದಿಸುತೆ ಪಿಂದೆಸೆಯೊಳತನು ಬರಲು ||೩೧||

ನಿಗರಗತ್ತುರಿ ಯಡ್ಡಬೊಟ್ಟಿನೆಡೆಯೊಳು ಪೊಳಪ |
ನುಗುಳ್ವ ನಣ್ಮುತ್ತಿನಕ್ಷತೆಯು ತಿಲಕದ ಮುದ್ದು |
ಮೊಗದಚ್ಚುಮಿಸುನಿಯಂದದ ತೋಳಬಂದಿಗಳ ನೊಳಕೊಂಡ ನಳಿತೋಳ್ಗಳ ||
ಝುಗಝುಗಿಪ ಪಸುರ್ವರಲ ಪದಕ ವಾವಿಸಿದೊಗು |
ಮಿಗೆಯ ಜೆಲ್ವಿನ ಮುಗುಳ್ಮೊಲೆಯನಿರಿವಿಡಿದ ಸಂ |
ಪಗೆಗಾವಿಯೊಳ್ಳುಡೆಯ ಸೆಳೆವಸಿಯ ನಡುವಿನೆಳವೆಣ್ಗಳೆಯ್ದಿದರಲ್ಲಿಗೆ ||೩೨||

ಆವರ ಕಣ್ಗುಡಿ ಮನೋಭವನ ವಂಕುಡಿ ಸಮಂ |
ತವರ ಸೊಬಗಿನ ಬೆಸುಗೆ ಯೆಸಳುಗಣೆಯಿಸುಗೆಯುಂ |
ತವರ ಮೊಳೆನೊಳೆ ವಿಟರ್ಗೆ ಹಗಲುಗತ್ತಲೆ ಯವರ ಮೆಲ್ಪಿನಡಿ ತಳಿರ್ಪೈವಡಿ ||

ಅವರ ಸರಸಾಟ ಜತಿಗಳ ಬಲ್ಮೆಯೋಟ ವೆಸೆ |
ವವರ ಮೆಯ್ಯೊಳ್ವಣ್ಣ ರತಿಯ ಗರ್ವದ ತಿಣ್ಣ |
ವಿವರಿಸುವೊಡೆನಿಪ ಯುವತಿಯರು ನಡೆತಂದರಾ ಶಿವನ ಭವನಕೆ ಮುದದೊಳು ||೩೩||

ಸುಲಿಪಲ್ಲ ಬೆಳ್ಗದಿರ್ಗಳಿರವಂತಿಯಲರ್ಗಳಂ |
ಬಳಿಗೆದರಿದಂತೊಪ್ಪುತಿರಲು ಚೆಂದುಟಿಯ ಕೆಂ |
ಬೊಳವು ದಾಸಣದ ಕುಸುಮವನು ಪಸರಿಸಿದಂತಿರೊಪ್ಪುತಿರೆ ಸುಳಿಗುರುಳ್ಗಳ ||
ಬಳಗದ ಕರಂಗಿದೆಳೆವೆಳಗಸಿತವರ್ಣದು |
ತ್ಪಲದಲರ ಪರಕಲಿಸಿದಂತೊಪ್ಪುತಿರಲು ಕಡು |
ಚೆಲುವೆಯರು ಬಂದರಾ ದೇವದೇವನ ವಾಮದೇವನಾಸ್ಥಾನದೆಡೆಗೆ ||೩೪||

ಜಡಿವ ನಿಡುಸೋರ್ಮುಡಿಗಳಿಡುಗುಂಡು ಸುಣ್ಪಿಡಿದ |
ಕುಡುವುರ್ಬು ಪದವಿಲ್ಲು ಮಿಸುಪ ತೆಳ್ವಸುರ ಮೇ |
ಲಡರ್ದ ಕೊನೆವಾಸೆ ಕೂರಿಟ್ಟಿ ಸುಕ್ಕುಂಗುರುಳ ಪಜ್ಜೆಗಳುರುಳ್ಗಳಾಗೆ ||
ದೃಢವುಳ್ಳ ಚಿತ್ತದಗ್ಗಳದ ಸಂಯಮಿಮೃಗದ |
ಗಡಣಮಂ ಬೇಂಟೆಯಾಡುವ ಕಂತುಧೀವರಂ |
ಪಿಡಿದ ಸಾಧನದಿಕ್ಕೆ ಯೆನಿಪೊಡಲ ಗರುವೆಯರು ನಡೆತಂದರೀಶನೆಡೆಗೆ ||೩೫||

ಪಗಲೊಳೊಂದಿದ ರಥಾಂಗದ ಮಿಥುನದಂದಮಂ |
ಮಿಗುವ ನಿಬಿಡಸ್ತನದಮೇಲೆ ಲೇಪಿಸಿದ ಕಾ |
ರಗಿಲ ಕೆನ್ನಯೊಳು ಸೋರುವ ಜವಾದಿಯ ಜವಳಿಗಂಪುರ್ವಿ ಪಪ್ಪಿ ನೆಲಸಿ ||
ಮಗಮಗಿಸುತಿರೆ ರಾಜವೀಧಿ ನಡೆತಂದರಾ |
ಮೃಗರಾಜಮಧ್ಯೆಯರು ಮೃಗಮದಸುಗಂಧಿಯರು |
ಮೃಗಶಾಬನಯನೆಯರು ಮೃಗಧರಾನನೆಯರೊಸೆದಗಜೇಶನಿರ್ದ ನೆಲೆಗೆ ||೩೬||

ನಾಗವಾಸದ ಪೆಣ್ಗಳಿಂತು ಬಂದೀಶ್ವರನ |
ದೇಗುಲವ ನೊಳಪೊಕ್ಕು ನಮಿಸಿ ಸಾಲ್ಗೊಂಡು ನಿಂ |
ದಾಗ ದಂಡಿಗೆಯುಪಾಂಗದವಾಸದಿಂ ಪರದೊಳೊಡವೆರಸಿ ಸೊಗಸುವಡೆದು ||
ರಾಗಾಧಿದೇವತೆಯರಂತೆ ಪಾಡಿದರು ಪೆ |
ಣ್ಗೋಗಿಲೆಯ ಮೆಲ್ಲುಲಿಯ ಗೆಲ್ವ ಮೃದುನಿನದದ ಮು |
ಹಾಗರುವಗಾಣೆಯರು ಭೃಂಗನಿಭವೇಣಿಯರು ತಾನಮಾನಂವೆಹಿಸಲು ||೩೭||

ಪದ ಪಟ್ಟಿ ಗೀತಪ್ರಬಂಧ ಜಕ್ಕಡಿ ಚಿಂದು |
ಮೊದಲಾದ ಠಾಯ ವಾಯತಿಯೊಪ್ಪಿ ಮೆರೆಯೆ ಕೋ |
ವಿದರು ತಲೆದೂಗುತಿರೆ ಶುದ್ಧಸಾಳಂಗ ಸಂಕೀರ್ಣವೆಂದೆನಿಪಿನಿತರ ||
ಚದುರಿಕೆಗಳಂ ತೋರಿ ರಂಗುರಸಕತ್ತರಂ |
ಮೃದುಮಧುರಗಂಭೀರವೆಂಬಿವಂ ಬಿತ್ತರಿಸಿ |
ಪದಪಿನಿಂ ಪಾಡಿದರು ಗಾನರಸವೆನಿಪ ಪಾಲ್ಗಡಲುಕ್ಕಿ ಭೋರ್ಗರೆಯಲು ||೩೮||

ಪೊಡೆವ ಬಿರುದಿನ ಡವುಡೆ ಮುಂದುಲಿಯ ಲಂದಳವ |
ನಡರಿ ಚಿಮ್ಮುವ ಧವಳ ಚಾಮರವ ಪಿಡಿದ ಪೊಂ |
ಗೊಡೆಯ ಸಡಗರವೆಸೆಯ ಲಿಕ್ಕೆಲದೊಳೋಲೈಸಿಬರಲು ಪರಿಚಾರಿಕೆಯರು ||
ನಡೆತಂದು ಗೋಪುರದ ಮುಂದಿಳಿದು ಶರಣೆಂದು |
ಕಡುಚದುರ ನಚ್ಚಣಿಯರೆಯ್ದಿ ರಂಗಸ್ಥಲದೊ |
ಳೊಡವೆರಸಿ ರಂಜಿಪಂತಾಮೇಳದಬಲೆಯರ ಗಡಣದೊಳ್ ನಿಂದಿರ್ದ್ದರು ||೩೯||

ಲಲಿತತರಸಾರ ಸಂಗೀತರಾಶಿಯ ನಳಿವ |
ಕೊಳಗದಂತಿರೆ ದ್ರುತಗುರುಪ್ಲುತತ್ರಯದ ಕ |
ಟ್ಟಳೆಯೊಳೊಂದಿಸಿ ಮೇಳವೆನಿಪ ಕಾಯಕ್ಕೆ ಜೀವಸ್ಥಾನವೆಂಬಂದದಿಂ ||
ನಲವಿನಿಂ ನರ್ತಿಸುವ ನಚ್ಚಣಿಯ ಕಾಲ್ಮನಂ |
ಗಳಿಗೆ ಬೆಂಬಲವಾಗಿ ನುಡಿಸಿದರು ತಾಳಧರಿ |
ಗಳು ಕೂರ್ತು ಶಬ್ದಗಳ ನುಗ್ಗಡಿಸುತಾನಂದ ತಾಂಡವಪ್ರಿಯನಿದಿರೊಳು ||೪೦||

ಕೊನೆವೆರಲ ಸಂಚಾರದಿಂ ಷಡ್ಜಋಷಭಾದಿ |
ನಿನದವೇಳಂ ತೋರಿ ತಾರಮಧುರಂಮಂದ್ರ |
ವೆನಿಪ ಸುಸ್ಥಾನತ್ರಯಂ ಪರಿಸ್ಫುರಿಸೆ ರಾಗಂಗಳಂದಂಬಡೆಯಲು ||
ಅನುವಾದಿಯುಂ ವಿವಾದಿಯು ವಾದಿ ಸಂವಾದಿ |
ಯೆನಿಪ ಮೆಲ್ಲುಲಿಯ ಸೊಗಸೊದಗೆ ಪೊಂಗೊಳಲ ಬಾ |
ಜನೆಯ ಜಾಣ್ಮೆಗಳ ಕಾಣಿಸುತೊಪ್ಪಿದರು ವಾಸಗಾರ ರಗ್ಗದ ನೀರರು ||೪೧||

ಎಡೆಕಟ್ಟು ಕಡೆಕಟ್ಟು ಜತಿಗಳುಪ್ಪರದಜತಿ |
ತುಡುಕು ಪಹರಣವಾದಿಯಾದ ಶಬ್ದಂಗಳು |
ಗ್ಗಡದ ಗತಿಯೊಯ್ಯಾದಿಂದರ್ಧಸಮಹಸ್ತ ಕತ್ತರ ವಿಷಮಕತ್ತರ ||

ಬೆಡಗಾಗಲಲಗ ಬೊಟ್ಟಲಗ ಬೆಟ್ಟುಗಳಿಂದೆ |
ನುಡಿಸಿದರು ಠಾಯಮದ್ದಳಿಗ ರತಿಶಯಮುದವ |
ನೆಡೆವಡಿಸಿ ಸಭೆಗೆ ನಂದೀಶವಾದ್ಯಪ್ರೇಮಿಸೋಮೇಶನಭಿಮುಖದೊಳು ||೪೨||

ಅಯ್ದೆದು ಮೇಳದೆಸಕದ ಪವಣನಿರದೆ ಗಂ |
ಭೀರಸ್ವರಂ ನೆಗಳೆ ತುತ್ತುಗುದುಧೂವೆಸು |
ತ್ತೋರಣಿಸಿ ಹೆಚ್ಚುಕುಂದಿಲ್ಲದಂತಿರೆ ಶ್ರುತಿಯನಳವಡಿಸಿ ಗಾಯಕಿಯರ ||
ಸಾರಸಂಗೀತಮಂ ಬಣ್ಣವೇರಿಸಿ ಕಹಳೆ |
ಗಾರರೂದುತ್ತಿರ್ದ್ದ ರಲರ್ವಂಡಸುಂಡು ಝೀಂ |
ಕಾರಿಸುವ ಮರಿದುಂಬಿವಿಂಡಿನಿಂಚರದಂತೆ ಸೊಗಸು ಸೂಸುತ್ತಮಿರಲು ||೪೩||

ಎಡದಪೆಗಲಿಗೆ ಕಂದವಟ್ಟಿಗೆಯ ನೆಗಪಿ ಯಾ |
ಕಡೆಗೆ ವ್ಯೆಮುರಿದರ್ಧಚಂದ್ರನಿಭಕರತಳವ |
ನೆಡೆವಡಿಸಿ ಜಾರುಕತ್ತರ ಜೋಡಣೆಗಳೊಳೆರವಿಲ್ಲದಂತೊಡಗೂಡಿಸಿ ||
ಪಡಿಸಣ ಚಮತ್ಕಾರ ಝೇಂಕಾರ ಕಿವಿಗಿಂಬು |
ವಡೆದಿರ್ದ್ದ ಶಬ್ದಶೃಂಗಾರಮೊದಲಾದುವಂ |
ನುಡಿಸಿ ತೋರಿದರು ಕುಡುಪಾವುಜಿಗ ರೀಶನ ಸಭಾಂತರಾಳದೊಳಗಂದು ||೪೪||

ಕಂದಾವುಜಂ ಪಟಾವುಜ ವಡಾವುಜಮೆಂಬಿ |
ವೊಂದೆಸೆಯೊಳುಲಿಯೆ ಕಿನ್ನರಿಯ ಗೊಂದಣದಿಂಚ |
ರಂದೋರುತಿರಲುಪಾಂಗದ ಟೇವಿ ತೇವಣಿಸಲುರುಮೆ ನುಣ್ಣನಿಗಾಣಿಸೆ ||
ಒಂದೆಸೆಯೊಳಾಸಮಯದಲ್ಲಿ ಪಜ್ಜಳಿಪ ಪೊಸ |
ಪೊಂದೆರೆಯ ಮರೆವಿಡಿದು ಪಾತ್ರಶೇಖರಿ ಬಂದು |
ನಿಂದಳೋರಂತೆ ಮೇಳಂ ಸುರೇಂದ್ರನ ನಾಟ್ಯಶಾಲೆಯಂ ಪರಿಭವಿಸಲು ||೪೫||

ಮಿಸುನಿವಟ್ಟೆಯ ಚಲ್ಲಣಂ ಬಟ್ಟಮುತ್ತು ತೆ |
ತ್ತಿಸಿದ ಮೊಲೆಕಟ್ಟು ಕೆಂಬರಲು ಪಸುರ್ವರಲು ಕೀ |
ಲಿಸಿದೋಲೆ ಪೊಂಗೆಜ್ಜೆಯಮರ್ದ ಕಾಂಚೀದಾಮ ಕಟಿಸೂತ್ರ ವರ್ಧೋರುಕಂ ||
ಮಿಸುಗಲಾ ಪಾತ್ರಚೂಡಾಮಣಿ ಕರಂ ಕದಂ |
ಬಿಸಿದ ವಾದ್ಯಶ್ರುತಿಯ ನಾಲಿಸುತೆ ರಂಭೆಯೂ |
ರ್ವಶಿಯ ಪಳಿವುತೆ ರೂಪುರೇಖೆಗಳೆ ನಾಮೇಳದೊಳಗೆ ರಾಜಿಸುತಿರ್ದ್ದಳು ||೪೬||

ಸರಿಯಲೊಂದೆಸೆಗೆ ತೆರೆ ಮಂಡಲದೊಳಿರ್ದು ಕ |
ಣ್ಮರಲ ಪೊಳಪಂ ಪಸರಿಸುತ್ತ ಲಾಹಾರ್ಯಕಂ |
ಸುರುಚಿರತರಾಂಗಿಕಂ ಸಾತ್ವಿಕಂ ವಾಚಕವೆನಿಪ್ಪ ನಾಲ್ದೆರದಭಿನಯಂ ||
ಸ್ಫುರಿಸಿ ನಟಿಸುತ್ತಿರ್ದಳಾರಾಯಪಾತ್ರಶೇ |
ಖರಿ ತಾಳಧರಿ ಮನೋಹರಿ ಯಿದಚ್ಚರಿಯೆನು |
ತ್ತಿರೆ ಸಭಾಜನ ವಿಸ್ಮಯಕ್ಕೆ ಭಾಜನವಾಗಿ ಮಸ್ತಕಮನಲ್ಲಾಡಿಸಿ ||೪

ಲೀಲೆಯಿಂ ಬಳಿಕೊರ್ವಳೆಯ್ತಂದು ನಿಂದು ಮುಖ |
ಜಾಲಿಯಂ ನೇರು ಬಿತ್ತರ ಲವಣಿ ಮುರುಹು ಗುಂ |
ಡಾಲ ಲಾಗನುಲಾಗು ದೂಷಿಯುಂ ವಿಷಮದೂಷಿಯು ಮೆನಿಪ್ಪಡಹುಗಳನು ||
ಮೇಲೆ ಪಲವಂದದ ದುವಾಡಮುಂ ಸುಳುಹು ವೊಳ |
ಕಾಲಸುಳುಹುಂ ಮಲಕು ಕತ್ತರಂ ತುಳಿಲೆನಿಪ |
ಲೀಲೆ ಪರಿಲೇಸುವಡೆಯಲ್ಕೆ ಗುಂಡಲವು ನಾಡಿದಳೀಶಸಂಮುಖದೊಳು ||೪

ಮೃಡನ ಮುಂಬಿಂಗೆ ಮತ್ತೊರ್ವಳೆಯ್ತಂದು ನು |
ಣ್ಗುಡಿಮಿಂಚಿನಂತೆ ಕಡೆಗಣ್ಣ ಬೆಳ್ವೆಳಗಿನಿದ |
ನೊಡರಿಚಲು ತುರುಬ ಮುಸುಕಿಟ್ಟು ಸಪುರದ ಸಾಲೆಚಲ್ಲಣವನೊಸೆದು ನೆಗಪಿ ||
ಪಿಡಿವುತ್ತೆ ಮೊಗದೊಳೆಳನಗೆದೋರಿ ಬಿನ್ನಣದ |
ನಡೆಸೊಲಪು ಡಿಳ್ಳಾಯದುರುಕಾಲರವೆಯಚೆ |
ಲ್ವಡರೆ ದೇಶಿಯ ನಾಡುತಿರ್ದಳು ವಿಲಾಸವಿಭ್ರಮಹಾವಭಾವವೆಸೆಯೆ ||೪

ಪರಿವಿಡಿಯ ಲಿಂತು ತೂರ್ಯತ್ರಯದ ರಚನೆ ಸಿಂ |
ಗರವಾದಿಯಾದೆಂಟುರಸದಿ ನಿಂತೊಪ್ಪುವವ |
ಸರದೊಳಭಿನುತಿಸುತ್ತೆ ಗದ್ಯಪದ್ಯಂಗಳೋದುವ ಕವಿಕದಂಬದಿಂದೆ ||
ಧರಿಸಿದ ವಿಭೂತಿರುದ್ರಾಕ್ಷೆ ಯುಪವೀತಮು |
ಟ್ಟೆರಲೆದೊವಲುತ್ತಮಾಂಗದಲಿಂಗ ಜಪಮಾಲೆ |
ವೆರಸಿ ರಂಜಿಸುವ ಶಿವಯೋಗಿಗಳಿನೆಸೆದುದಾಸೋಮೇಶ್ವರನ ಸನ್ನಿಧಿ ||೫೦

ಆವೇಳೆಯಲ್ಲಿ ಪೂರ್ವದೊಳಬ್ಜಗರ್ಭನುಂ |
ಗೋವಿಂದನುಂ ಸೆಣಸಿ ವಾದಿಸುವ ಸಮಯದೊಳ್ |
ದ್ಯಾವಾಧರಾತಳದಿ ತಳತಳಿಸಿ ತೊಳತೊಳಗಿ ಬೆಳಪ ದಿವ್ಯಪ್ರಕಾಶಂ ||

ಆವರಿಸಿ ಮೂಡಿದ ಮಹಾಲಿಂಗದೊಳಗೆ ತೇ |
ಜೋವಿಲಾಸಂ ಪೊಡಲ್ದೇಳ್ಗೆವಡೆದಂತಖಿಳ |
ದೇವವಂದಿತಸೋಮನಾಥ ಶಿವಲಿಂಗದೊಳು ಪೊಣ್ಮಿದುದನೂನಕಾಂತಿ ||೫೧||

ಇದು ಪೊಸತೆನುತ್ತೆ ಸಭೆ ಬೆರಗಾಗೆ ರೂಹುದೋ |
ರಿದನುಮಮ ಶಿವಲಿಂಗದೊಳಗೆ ನಿಡುಗೆಂಜಡೆಯ |
ಹೊದರಡೆ ಲಲಾಟಾಕ್ಷಿಯುದೆ ವಿಮಳಭಸಿತತ್ರಿಪುಂಡ್ರವದೆ ನಗೆಮೊಗವಡೆ ||
ಸದಮಲಸುವರ್ಣಮಯಕಂಥೆಯುದೆ ಕೌಪೀನ |
ವದೆ ಕರ್ಣಯುಗಳದೊಳು ವಜ್ರಕುಂಡಲ ಪೊಳೆವು |
ತದೆ ನೋಡೆನುತೆ ಶರಣಜನ ಪೊಗಳೆ ರೇವಣಾಸಿದ್ಧಜಗದಾರಾಧ್ಯನು ||೫೨||

ಇಂಗಡಲೊಳಮರ್ದು ಕಲ್ಪದ್ರುಮದೊಳಲರು ನೆರೆ|
ದಿಂಗಳೊಳು ತಣ್ಬಿಸಿಲು ಸಂಭವಿಸುವಂತೆ ಶಿವ |
ಲಿಂಗದೊಳಗವತರಿಸಿ ರೇವಣಾಸಿದ್ಧೇಶ ನತುಳಪರಮೋಹಲ್ಲಾಸನು ||
ಪಿಂಗಲಜಟಾಜೂಟ ಪಣೆಗಣ್ಕರಸ್ಥಲದ |
ಲಿಂಗಭಸ್ಮಾಂಗರುದ್ರಾಕ್ಷ ಪವಿಕುಂಡಲಂ |
ಪೊಂಗಂತೆ ಕೌಪೀನ ಯೋಗದಂಡಂಸಹಿತ ಶಿವಸನ್ನಿಧಿಯೊಳಿರ್ದನು ||೫೩||

ಮೊರೆದುದಾಕಾಶದೊಳು ದೇವದುಂದುಭಿಗಳಂ |
ದೆರಗಿದುದು ಮೆಲ್ಲರಲಮಳೆ ಬರಡು ಹಯನಾಯ್ತು |
ಕೊರಡು ಚಿಗುರ್ತುದು ಸಕಲಜನದಂತರಂಗದೊಳು ಪರಿತೋಷ ಪಲ್ಲವಿಸಿತು ||
ನೆರೆದಿರ್ದ ಸಭೆಯೆಲ್ಲ ಕೌತುಕಂಬಟ್ಟು ಶಂ |
ಕರನು ತಾನೀಲಿಂಗದಿಂ ಯೋಗಿರೂಪಮಂ |
ಧರಿಸಿ ಪೊರಮಟ್ಟನೆನುತಭಿನಮಿಸೆ ರೇವಣಾಸಿದ್ಧೇಶನೊಪ್ಪಿರ್ದನು ||೫೪||

ಗುರುಶಾಂತಮಲ್ಲಿಕಾರ್ಜುನ ಮಹಾಲ್ಲಿಂಗಾಂಗ |
ಪರಿಣತಾಂತಃಕರಣ ಬಾಲಸಿದ್ಧಾಧೀಶ |
ಪರಮಯೋಗೀಶ್ವರನ ಬೆಸನೊಳಾಂ ಪೇಳ್ದ ಸಿದ್ಧೇಶ್ವರಪುರಾಣದೊಳಗೆ ||
ಗಿರಿರಾಜಕನ್ಯಾಕಾವಲ್ಲಭನ ನೇಮದಿಂ |
ಧರಣಿಯೊಳು ರೇವಣಪ್ರಭುಲಿಂಗದಿಂದಲವ |
ತರಿಸಿದುತ್ತಮಕಥನವಿದು ಶಂಭುಶರಣರಾಲಿಪುದು ಮೂರನೆಯಸಂಧಿ ||೫೫||

ಸಿದ್ಧಸಂಕಲ್ಪವಹುದಾವಗಂ ರೇವಣಾ |
ಸಿದ್ಧೇಶಕಥನಮಂ ಕೇಳಿದೊಡೆ ಸಂಪತ್ಸ |
ಮೃದ್ಧಿಯಪ್ಪುದು ಸದಾರೋಗ್ಯದೀರ್ಘಾಯುಷ್ಯವಹುದು ಧರ್ಮವನೆ ಮಾಳ್ಪ ||
ಬುದ್ಧಿಸಮನಿಪುದು ಪಿರಿದುಂ ಪುತ್ರಪೌತ್ರಾಪ್ತಿ |
ವೃದ್ಧಿಯಪ್ಪುದು ವಿಮಳಕಮನೀಯತರುಣಹಿಮ |
ಕೃದ್ಧರನ ಶಾಂತಮಲ್ಲೇಶ್ವರನ ಕರುಣಾಕಟಾಕ್ಷರುಚಿಯುಂಟಪ್ಪುದು ||೫೭||

ಬಿಲ್ಲಮಗೆ ಚೇರಮಗೆ ಮಳೆಯರಾಜಗೆ ಸಿಂಧು |
ಬಲ್ಲಾಳಗೋಹಿಲಯ್ಯಂಗುದ್ಭಟಾರ್ಯಂಗೆ |
ಗೊಲ್ಲಳಗೆ ಮಲುಹಣಂಗಜಗಣ್ಣಮುಕ್ತಾಯಿಗಳಿಗೆ ಹಾವಿನಹಾಳಿನ ||
ಕಲ್ಲಯ್ಯಗೊಲಿದು ಸಾಲೋಕ್ಯಪದವಿಯನಿತ್ತ |
ಬಲ್ಲಹನೆ ಪಾಲಿಸುವುದೆಮ್ಮುವಂ ಶ್ರೀಶಾಂತ |
ಮಲ್ಲಿಕಾರ್ಜುನಲಿಂಗ ದಿವ್ಯಾಂಗ ಗಂಗಾನುಸಂಗತುಂಗೋತ್ತಮಾಂಗ ||೫೮||

೩ ನೆಯ ಸಂಧಿ ಮುಗಿದುದು.



ಶ್ರೀ ಶಿ ವಾ ಯ ನ ಮಃ.

## ೪ ನೆಯ ಸಂಧಿ.

ಪ || ಮಲಯಾಚಲದೊಳಗಸ್ತ್ಯಂಗೆ ಶಿವತತ್ತ್ವಮಂ |
ತಿಳಿಪಿ ಬೀಳ್ಕೊಂಡು ರಾಮೇಶ್ವರಕೆ ಬಂದು ಗುರು |
ಕುಲತಿಲಕ ಗುಪ್ತದಿಂ ಚೋಳಮಂಡಲದಲ್ಲಿ ದೇಶಾಂತರಂಗೆಯ್ದನು ||

ಆದ್ಯಂತಭರಿತ ಶಿವಾಶಾಂಭವಿಯ ವದನಾಬ್ಜ |
ಮಾದ್ಯದ್ದ್ವಿರೇಫ ಮಂಗಳಮೂರ್ತಿ ಶೈಲಾದಿ |
ವಾದ್ಯಮೃದುಮಧುರರುಚಿಲೋಲುಪ ಮಹಾನಟ ಮಹಾದೇವ ಮಾಧವನುತ ||
ವಿದ್ಯಾಸ್ವರೂಪ ನಿಶ್ಚಲ ನಿರ್ವಿಕಲ್ಪ ನಿರ |
ವದ್ಯ ನಿಸ್ಪೃಹ ಗಿರೀಶ್ವರ ಜಯಜಯ ತ್ರಾಹಿ |
ಸದ್ಯೋವರದಹಸ್ತ ಶಾಂತಮಲ್ಲೇಶ್ವರ ಸಮುದ್ಯದಾನಂದಲೀಲ ||೧||

ಪೊಳೆವ ಪೊಂಗಂತೆಯ ವಿರಾಜಿಸುವ ವಜ್ರಕುಂ |
ಡಲದಜ್ಞ ಮಿಸುನಿಗೌಪೀನ ಪಳುಕೆಸೆವ ಲಾ |
ಕುಳದ ಕೆಂಜಡೆದುರುಬಿ ನಮಳತ್ರಿಪುಂಡ್ರದುತ್ತಮರತ್ನಮಯ ಮಕುಟದ ||
ಎಳಮುತ್ತಿನಕ್ಷಮಾಲೆಯ ಕರಸ್ಥಲದೊಳು |
ಜ್ಜ್ವಳಿಪ ಶಿವಲಿಂಗ ದನುಪಮನೆನಿಪ ನಿತ್ಯಮಂ |
ಗಳಮೂರ್ತಿ ಯಾದಿಸಿದ್ಧಂ ರೇವಣೇಶ್ವರಂ ಪಾಲಿಸುಗೆ ನಿಜಶರಣರಂ ||೨||

ಬೀಳುಕೊಟ್ಟಾಸಭೆಯ ನಿಷ್ಟಸಿದ್ಧಿಯನಿತ್ತು |
ಪಾಲಿಸಿ ಬಳಿಕ್ಕೆ ಕರತಳದೊಳುಜ್ಜ್ವಲಿಸುವ ಮ |
ಹಾಲಿಂಗದೊಳಗೆ ಕಾಣಿಸುವೈದುಮೊಗದ ದಶಭುಜದ ಮಂಗಳಮೂರ್ತಿಯ ||
ಆಲೋಕನಂಗೆಯ್ದು ಹೃತ್ಪದ್ಮಕರ್ಣಿಕೆಯ |
ಮೇಲಿಂಬುಗೊಳಿಸಿ ಪೂಜಿಸಿ ನೇಮವಂ ಪಡೆದು |
ಗಾಳಿವಟ್ಟೆಯನಡರಿ ರೇವಣಾಸಿದ್ಧೇಶ ಗುರುರಾಯ ನಡೆತಂಡನು ||೩||

ಬೆಳುಮುಗಿಲ್ಬಳ್ಳಿಮಿಂಚಂ ತಾರಕಾವಳಿಯ |
ನಳವಡಿಸಿ ಕೊಂಡಿಳಿದು ಬರ್ಪಂತೆ ಧರಿಸಿದೆಳೆ |
ವಳುಕಿನೊಪ್ಪುವ ಮಣಿಯ ಜಪಮಾಲೆ ನವಸುವರ್ಣದ ಕಂಥೆ ಕಿವಿದೊಡವಿನ ||
ತೊಳಪ ರನ್ನದ ಸುಣ್ಣದಿರ ತೊಂಗಲುಂ ವಿನಿ |
ರ್ಮಳವೆನಿಪ ಭಸಿತಲೇಪನದಂಗ ಬಗೆಗೊಳಿಸ |
ಲಿಳಿತಂದನಾ ರೇವಣಸಿದ್ಧದೇಶಿಕಂ ಬಾವನ್ನವೆಟ್ಟನೆಡೆಗೆ ||೪||

ವಿನುತಮುಕ್ತಾಫಳಾಕರ ತಾಮ್ರಪರ್ಣಿಯೆಂ |
ದೆನಿಪ ನದಿಯೇ ತನ್ನೊಳುದ್ಭವಿಸಿತಧಿಕಜಂ |
ದನವೆ ತನ್ನಲ್ಲಿರ್ದ್ದತರು ವಜ್ರರನ್ನಗಣಿಗಳಿಗೆ ನೆಲೆ ನಿಜನಿತಂಬಂ ||
ಮುನಿಜನಂಗಳೊಳಗ್ರಗಣ್ಯನೆನಿಸುವ ತಪೋ |
ಧನನಗಸ್ತ್ಯನ ಪವಿತ್ರಾಶ್ರಮಂ ತನ್ನ ಕೋ |
ಡೆನಿಪ ಪೆಂಪಡರ್ದ ಮಲಯಾದ್ರಿ ಯೊಪ್ಪಿದುದು ಮಾಂಗಲ್ಯಸಾಕಲ್ಯದಿಂದೆ ||೫||

ಮಗಮಗಿಪ ಸಿರಿಕಂಡಸೆಸಿವರಂಗಳ ತಳದೊ |
ಳೊಗುಮಿಗೆಯ ನಲವಿನಿಂ ತೆಕ್ಕೆಗಟ್ಟಿರ್ದ್ದ ಪಾ |
ವುಗಳ ಪೆಡೆವರಲ ಕೆಂಬೆಳಗು ಬೇಸಗೆಯ ಜಳದಿಂದೊಡೆದ ಪೆರ್ಚಿದಿರ್ಗಳಿಂ ||

ನೆಗೆದು ಪರಕಲಿಸಿದೆಳೆಮುತ್ತುವೆಳಗಿನೊ ಳೊಂದಿ |
ಜಗಜಗಿಪ ಬಾಲಾತಪಂ ತಣ್ಗದಿರೊಳೊಂದಿ |
ಸೊಗಯಿಪಂತಿರೆ ಮನಂಗೊಳಿಸಿದುದು ಮಲಯಗಿರಿ ಪರಮಸೌಖ್ಯದ ಹರವರಿ ||೬||

ಪಲ್ಲಮರಿವಿಂಡಿಂಗೆ ಮೊಲೆಗೊಟ್ಟು ಸಂತೈಸಿ |
ಸಲ್ಲೀಲೆಯಿಂದಿರ್ಪ್ಪ ಸಿಂಗವೆಣ್ಗಡಣದಿಂ |
ಪುಲ್ಲೆವಸುಳೆಗಳ ಗೊಂದಣವ ನೊಸೆದೋವುತಿಹ ಪೆರ್ಬ್ಬುಲಿಗಳೊಗ್ಗಿನಿಂದೆ ||
ಮೆಲ್ಲನಡಿಯಿಡುವೆಂಟಡಿಯ ಕೊಣಸುಗಳ ತಂದು |
ಪಲ್ಲವದ ಪಾಸಿನೊಳ್ಪಟ್ಟಿರಿಸಿ ಮರನ ನೆಳ |
ಲಲ್ಲಿ ಸಲಹುವ ಜವಳಿದಲೆವಕ್ಕಿಗಳ ನೇಳ್ಗೆವೆತ್ತುದಾಮಲಯಾಚಲಂ ||೭||

ಎಳದಳಿರಿನುಡಿಗೆ ಪೊಗರುಗುವ ನಿಗ್ಗವದ ತೋ |
ಳ್ವಳೆ ಕನಕಕೇತಕೀದಳ ಕರ್ಣಪತ್ರ ಪೊಂ |
ಬುಲಿದೊವಲ ರವಕೆಗೆ ನಿತಂಬದೊಳ್ನೇಲ್ಪ ನುಣ್ಚುಡೆ ಜಾಜಿಬಾವನ್ನದ ||
ಅಲರ್ದಳೆದ ಸುಳಿಗುರುಳು ಪಿಡಿದ ಬಿಲ್ಲಂಬು ಪೆ |
ರ್ಮ್ಮೊಲೆ ಜೆಲ್ಲಗಣ್ಣೊಪ್ಪೆ ಜೆಲ್ವಿನಿಂ ಜೆಂಜವೆ |
ಣ್ಗಳು ವಿಹರಿಸುತಿರ್ದ್ದರದರ ತಪ್ಪಲೊಳು ಕಾದಲರುಸಹಿತೊಲವಿನಿಂದೆ ||೮||

ಆನೆದಲೆಯಿಂದುದಿರ್ದ ವಿಮಳಮುಕ್ತಾಫಲವಿ |
ತಾನದೈಸರ ವಿಂಬುವೆತ್ತ ಕಠಿನೋತ್ತುಂಗ |
ಪೀನವೃತ್ತಸ್ತನದವೇಗಿಟ್ಟು ಕಿನ್ನರಿಯ ಬಾಜಿಸುತೆ ಸೆಳ್ಳಗುರ್ಗಳಿಂ ||
ಗಾನವಂ ಬಿತ್ತರಿಸು ತೊರ್ವ್ವಳ್ಕಿರಾತೆ ಬರು |
ತೇನೊಪ್ಪುತಿರ್ದ್ದಳೋ ಕಿವಿಜೋಲ್ದು ಕೇಳುತಂ |
ತಾನುಣ್ದನಿಯ ನೆರಲೆವಿಂಡು ಬೆಂಕೊಂಡು ನಡೆತರೆ ಮನವ ಮಾರುಗೊಟ್ಟು ||೯||

ಒಂಬುನೇರಿಲ್ವಣ್ಣ ಬಣ್ಣಮಂ ತಾಳ್ದಿ ಯಂ |
ದಂಬಡೆದ ತೆಳ್ಪೊಡಲ ಬಿಳಿಯ ಬೆಗುಗುವ ಲೋ |
ಲಂಬಕಟಕಂ ನೈದಿಲೆಳವೊಗ್ಗೆಯಂತುರದೊಳುಣ್ಮಿದ ಪರಲ್ಮೊಲೆಗಳ ||
ನಿಂಬದೆಲೆಯಂತಿರ್ದ್ದ ಪುರ್ಬ್ಬುಗಳ ತುರುಗೆವೆಯ |
ಮುಂಬರೆಯ ದಟವೀಚರೆಯ ರೆಯ್ದುತಿರ್ದ್ದರು ನಿ |
ತಂಬದ ತುರುಂಬಿನುರುಭಾರಕ್ಕೆ ಸಣ್ಣನಡು ಸಂಚಲಿಸೆ ದೇಸಿವಡೆದು ||೧೦||

ಬೆಳಲ್ವಣ್ಗಳಂ ಜೇನಹುಟ್ಟಿಯಂ ಬಲ್ಗಿಣಸು |
ಗಳನು ಕಾವಡಿಯೊಳಿಟ್ಟೈತರ್ಪ್ಪ ಪುರುಳಿಗರ |
ಗಿಳಿಗೆ ಪಂಜರವ ಕಟ್ಟುವ ವರಾಹದ ಮುತ್ತ ನೋರಣಿಸಿ ಮಲೆಗೆಯ್ದು ||
ಎಳವೆಂಡಿರಿಗೆ ಕುಡುವ ಸರಲ ತಿರ್ದುವ ಬಿಲ್ಲು |
ಗಳಿಗೆ ತಿರುವಿಡುವ ಚೆಂಚರ್ಕಳಿಹ ಗೂಳೆಯಂ |
ಗಳ ಪಜ್ಜೆ ಪರಿಶೋಭಿಸುತ್ತೊಪ್ಪಿದುದು ತಪ್ಪಲೊಳು ಶನ್ನಹಾಶೈಲದ ||೧೧||

ಆಗಿರಿಯ ತಪ್ಪಲಿಂತೊಪ್ಪುತಿರ್ದುದು ಮಧ್ಯ |
ಭಾಗವೇಂಚೆಲ್ವಾದುದೋ ದಳಿತಪುಷ್ಪದ ಪ |
ರಾಗದೊಟ್ಟಿಲು ತಳ್ಪ ವೆಳಲತೆಯ ಹೊದರು ಮನೆ ರತ್ನಾಂಕುರವೆ ದೀವಿಗೆ ||
ಆಗೆ ಕಿನ್ನರಮಿಥುನ ಕಿಂಪುರುಷಮಿಥುನತತಿ |
ನಾಗಗುಹ್ಯಕಯಕ್ಷಗಾಂಧರ್ವಮಿಥುನ ವೆ |
ಲ್ಲಾಗಳುಂ ಸುಸಿಲಸುಗ್ಗಿಯೊಳಿರೆ ಪಟೀರದ್ರುಮಪ್ರಕರದಿಡುಕುರಿಯೊಳು ||೧೨||

ಎರಲ ನೆಲವಾಲ ಕಂಚಾಲ ನವಿಲಡಿ ಹೊನ್ನೆ |
ಯರುಟಾಲ ದಿಂಡ ತಂಡಸ ತಪಸಿ ಬೆಟ್ಟದಾ |
ವರೆ ಬೆಲ್ಲವತ್ತ ಕಡಪೊಡ ವೆಕ್ಕ ಸೀವಣಿಗೆ ಬೇವಣಿಗೆ ನೆಲ್ಲಿ ತಾರೆ ||
ಅರಳಿ ಮುತ್ತುಗ ಮತ್ತಿ ಯತ್ತಿ ಮೊಳಗಾಜ ತುಂ |
ಬುರು ಸಿರಿಸ ಮೊದಲಾದ ತರುಗಳಿಂದೆಸೆದುದಾ |
ಗಿರಿ ಸಂಚರನ್ಮತ್ತಕರಿ ಪರಿಕಲಿತದರಿ ಝುರೀಜನಿತಮಣಿಮಂಜರಿ ||೧೩||

ಅರಸಂಚೆ ಸೋಗೆ ನವಿಲಮುಳ್ವಕ್ಕಿ ಟಿಟ್ಟಿಭಂ |
ಮರವಟೆಗ ನರಗಿಳಿ ಚಕೋರಕಂ ಲಾವಕಂ |
ಹರಡೆ ಕೋಗಿಲೆ ಖಂಜರೀಟ ವೆನಿಸುವುವಾದಿಯಾಗಿರ್ಪ್ಪ ಪಕ್ಷಿಜಾತಿ ||
ವಿರಸವಿಲ್ಲದೆ ಶುಟ್ಟಿವಡೆವಂತೆ ಕುಟುಕುಗೊಂ |
ಡುರುತರಶ್ರೀಖಂಡತರುಗಳಗ್ರದೊಳು ಸೈ |
ವರಿದಾಡುತಿರ ಲೊಪ್ಪಿತಾಮಲಯಪರ್ವತಂ ಸರ್ವಸುಖನಿಲಯವೆನಿಸಿ ||೧೪||

ಮರೆ ಕಡವೆ ಕಾಡೆಮ್ಮೆ ಕಾಳ್ಕೋಣ ನೆಕ್ಕಲಂ |
ಶರಭ ನೈವಂದಿ ತೋಳಂ ಮೊಲಂ ನರಿ ತೊಂಡ |
ಗುರಿ ಕತ್ತುರಿಯಮಿಗಂ ಗಂಡಾಮಿಗಂ ಖಡ್ಗಿ ಚಮರಿಮೃಗ ಕಿನ್ನರಿಮೃಗಂ ||

ಕರಡಿ ಕಿರುಬುಲಿ ಪೆರ್ಬುಲಿಗಳೆಂದೆನಿಪ್ಪ ಪರಿ |
ಪರಿಯ ಮೃಗಕುಲ ವೊಂದೆವೊಳೆಯೊಳುದಕವ ನೀಂಟಿ |
ಪರಿತೋಷದಿಂ ದೊಂದೆವೊಲನೊ ಳಾಡುತ್ತಿರ್ದ್ದ ವಾಮಲಯಪರ್ವತದೊಳು ||೧೫||

ಇಳಿತಪ್ಪ ಬೆಟ್ಟುವೊನಲೆಡೆಗೊಗ್ಗಿನಿಂ ಪೋಗಿ |
ತಿಳಿನೀರ ನೀಂಟಿ ಮೊಗವೆಟ್ಟೊಡಲ್ತಣ್ಪೇರೆ |
ನಳನಳಿಪ ಪಸಲೆಗೆಳ್ತಂದು ದೂರ್ವಾಂಕುರಂಗಳ ಮೇದು ನಸುಗರ್ಬ್ಬಿದ ||
ಮೊಳೆಗರುಕೆಯಂ ತಂದು ಮರಿಮಿಗಕೆ ಕುಟುಕನಿ |
ತ್ತೊಲವಿನಿಂ ಗಂಡೆರಲೆ ಪೆಣ್ಣೆರಲೆಗಳ ಹಿಂಡು |
ಗಳು ವಿಲಾಸದಿನಿರ್ಪ್ಪವಲ್ಲಿ ಮರಗಿಡುಬಳ್ಳಿವುಲ್ಪೊದರ ನಿಕ್ಕೆಗೆಯ್ದು ||೧೬||

ಮಂಜುಳಿಮೃಗಾಜಿನಾಗ್ರದೊಳಿಂಬುಗೊಂಡು ಮೃ |
ತ್ಯುಂಜಯಾಘೋರತ್ರಿಯಂಬಕಾದ್ಯುರುಮಂತ್ರ |
ಮಂ ಜಪಿಸುತಿಹ ರುದ್ರಗಾಯತ್ರಿ ನಂದಿಗಾಯತ್ರಿಗಳ ನುಪದೇಶಿಪ |
ರಂಜಿಸುವ ಶಿವನ ಲೀಲಾವಿಗ್ರಹಂಗಳಿರ |
ವಂ ಜಾನಿಸುವ ತಪಸಿಗಳ ತಂಡದಿಂ ಮೆರೆವ |
ಕುಂಜಂಗಳಿರ್ದುವಾ ಸಿರಿಕಂಡವೆಟ್ಟಿನ ಶಿಖಂಡಮಂಡಲದೆಡೆಯೊಳು ||೧೭||

ಸುಲಿಪಲ್ ತ್ರಿಪುಂಡ್ರದಗ್ರದ ಗಂಧ ವಕ್ಷಸ್ಥಾ |
ವಳಿ ಧವಳೆಯಜ್ಞಸೂತ್ರಂ ಜಡೆದುರುಂಬು ನಿ |
ರ್ಮಳಿನಭಸಿತೋದ್ಧೂಳಿತಾಂಗ ವಾಧಾರಗುಂಡಿಗೆ ಧವಳಥೋತ್ರದುಡಿಗೆ ||
ಕುಳಿರ್ಗಲ್ಲ ಜಲಪಾತ್ರೆ ಕಪ್ಪಡದರ್ಚ ತೋರ್ಪ ತು |
ಪ್ಪುಳುಮಿಸೆ ಪಳುಕುವಾವುಗೆಗ ಳಮರ್ದಿರೆ ಮನಂ |
ಗೊಳಿಸುತ ಕುಮಾರತಾಪಸರು ಸೌರಂಭದಿಂ ಸಂಚರಿಸುತಿರ್ದ್ದರಲ್ಲಿ ||೧೮||

ಮೃಡನ ಮೂರ್ತಿಧ್ಯಾನದಲ್ಲಿ ಚಿತ್ತಾದಿಗಳ |
ಬಿಡೆಯವಿಲ್ಲದ ತೆರದಿ ಬೆರಸಿ ಪೊರಗಂ ಮರೆದು |
ನಿಡುಜಡೆಯಮೇಲೆ ಪುತ್ತಡರಿ ಬಿದಿರ್ವೆಂಡು ಬೆಳೆದಿಡಿಕಿರಿದ ಹೊದರಿನೊಳಗೆ ||
ಒಡರಿಚಿ ವಿಹಂಗತತಿ ಗೂಡುಗಳ ನೊಲಿದು ನೆಲೆ |
ವಡೆದಿರೆ ತಪಂಗೆಯ್ವ ಮುನಿಗಳೊಪ್ಪಿದರು ನೆಲ |
ನೆಡೆಯೊಳೊಪ್ಪುವ ನಿಧಾನದ ಪಾಂಗಿನಿಂ ತಪಸ್ತೇಜವಭಿವೃದ್ಧಿವಡೆಯೆ ||೧೯||

ಪಿಂದುಮುಂದೆಡಬಲದೊಳುರಿವಿಂಗಳದ ನಡುವೆ |
ನಿಂದು ವಾಮಾಂಘ್ರಿಯಂ ಬಲಗಾಲೊಳಿರಿಸಿ ಕೊ |
ಪೊಂದಿರ್ದ್ದ ಸೂಜಿಯಗ್ರದೊಳು ಸೂರ್ಯಾಭಿಮುಖವಾಗಿ ನೆಗಪಿದ ತೋಳ್ಗಳು ||
* ಅಂದಬಂಡೆಯೆ ಮುಗಿದ ನಿಡುಗಣ್ಮರಲ್ಸಂತ |
ತಂ ದಿವ್ಯಪಂಚಾಕ್ಷರೀಜಪಯುತಾಧರ |
ಸ್ಪಂದನಂ ವಿಭ್ರಾಜಿಸಲು ಸಂಯಮಿಗಳುಗ್ರತಪವ ನೊಡರಿಚುತಿರ್ದ್ದರು ||೨೦||
ಗುರು ತೋರೆ ಖೇಚರೀಮುದ್ರೆಯಂ ಕಂಡಲ್ಲಿ |
ಪರಮಾಮೃತಂ ಪರಿಸ್ಫುರಿಸ ಲದನಿಂದುಶೇ |
ಖರಗೆ ಮನವೆಂಬ ಕರದಿಂದರ್ಪಿತಾವಧಾನಂಗೆಯ್ದು ನೆರಶೆವಡೆದು ||
ಹರುಷದಿಂ ತತ್ಪರಬ್ರಹ್ಮಾನುಸಂಧಾನ |
ದಿರವಿನಿಂ ಯೋಗನಿದ್ರೆಯೊಳಿರ್ಪ್ಪ ಯೋಗಿಗಳ |
ನೆರವಿ ಲೆಪ್ಪದ ಬೊಂಬೆಗಳ ಬಂಬಲಂತೆ ನಿಬ್ಬೆರಗು ವಡೆದೊಪ್ಪಿರ್ದ್ದರು ||೨೧||
ಅಲರ್ಗಳಂ ತಿರಿದು ಕರಡಗೆಯ ತೀವುವ ರಂಗ |
ವಲಿಯನಿಕ್ಕುವ ಜಡೆಗೆ ಸುಂಕಿಡುವ ಭಸ್ಮಮಂ |
ವಿಲಸದ್ವಿಭೂತಿಯಂ ಭಸಿತಮಂ ಕ್ಷಾರರಕ್ಷೆಗಳಂ ನಿಜಾಂಗದಲ್ಲಿ ||
ತಳೆದು ಸಾಮರ್ಗ್ಯಜುರಥರ್ವ್ವಣಂಗಳನು ಸ |
ಲ್ಲಲಿತಪದಪಾಳಿಕ್ರಮುಂತಪ್ಪದಭ್ಯಾಸಿ |
ಪೆಳವರೆಯುದಗ್ಗಳದ ಮತಿವಂತರೆಂದೆನಿಪ ಜತಿಗುವರರೊಪ್ಪಿರ್ದ್ದರು ||೨೨||
ಪರಮಶೈವಾಗ್ನಿ ಹೋತ್ರಂಗಳಂ ಮಾಳ್ಪ ಪಂ |
ಕರುಹತಂತುವಿನ ಪೊಸಜನ್ನಿವರದೋರಣಮ |
ನುರದೊಳೆಳಲಿಡುವ ವಿವಿಧಾಗಮಾರ್ಥಂಗಳಂ ಶಿಷ್ಯರ್ಗ್ಗೆ ಬಿತ್ತರಿಸುವ ||
ಹರಪುರಾಣಂಗಳಂ ಕೇಳಿಸುವ ವೇದಾಂತ |
ದಿರವಿದೆಂದರಿಪುವ ಮಹಾಮುನೀಶ್ವರರೊಪ್ಪಿ |
ದರು ತತ್ಪಟೀರಮಯಪರ್ವತಾಗ್ರದೊಳು ಕಲಶಪ್ರಭವನಾಶ್ರಮದೊಳು ||೨೩||
ಪಳಿದು ಸಂಸಾರಮಂ ಬೀಭತ್ಸರಸ ವೆದೆಯೊ |
ಳಳನಡೆ ಕೃಪಾರಸಂ ನಿಡುಗಣ್ಗುಡಿಯೊಳು ಪ |
ಜ್ಜಳಿಸೆ ಸಕಲೇಂದ್ರಿಯಮ ನುಪಶಮಿಸಿ ನಿಂದಿರವಿನೊಳು ಶಾಂತರಸವೆಸೆಯಲು |

---

* ಪಾ|| ಅಂದವಿಡೆಮುಗಿದನಿಡುಗಣ್ಣರಸ್ಥಲಲಿಂಗೆ | ಮುಂದಿವ್ಯ

ಗೆಲಿದತನುಸಮವರ್ತ್ತಿಗಳನು ವೀರಂ ಸಮು |
ಜ್ಜ್ವಲಿಸೆ ಭವನದೊಳೊಪ್ಪುತಿರ್ದ್ದ ಯೋಗೀಶ್ವರ |
ರ್ಕ್ಕಳ ಸಾಲ್ವಿರಾಜಿಸಿದು ದಿರ್ಸ್ವಕ್ಕದಲ್ಲಿ ತತ್ಪರ್ವತಾಗ್ರಸ್ಥಲದೊಳು ||೨೪||

ಗಗನಕ್ಕೆ ಬಿನದದಿಂ ನೆಗೆವ ವಿದ್ಯಾಧರಿಯ |
ರುಗಳಿ ನದ್ಭುತರಸಂ ಶೃಂಗಾರರಸ ವೆಯ್ದೆ |
ನಗಿಸಿ ಮುನಿವಟುಗಳಂ ಚೇಷ್ಟಿಸುವ ಕಪಿಗಳಿಂ ಹಾಸ್ಯರಸ ವಾಚಾರ್ಯ್ಯರ ||
ಬಗೆಗೆ ಭಕ್ತಿಪ್ರಯುಕ್ತಂ ಸೇವಿಸುವ ಛಾತ್ರ |
ರುಗಳಿಂದೆ ಭಯರಸಂ ಪಂಚಾಗ್ನಿ ಮಧ್ಯದೊಳ್ |
ಮಿಗೆ ತಪಂಗೆಯ್ವರಿಂ ರೌದ್ರರಸ ಮೊಪ್ಪುತಿರೆ ತದ್ಗಿರಿ ಬೆಡಂಗಾದುದು ||೨೫||

ಎಲೆವನೆಗಳೊಗ್ಗಿನೊಳು ತಣ್ಣೆಳಲಿಡಿದ ಕಾರ |
ಗಿಲ ಪಟೀರದ ಸಪ್ತಪರ್ಣದ ಸುರದ್ರುಮದ |
ತಳದ ಕೆಂದಳಿರ್ವಾಸಿನಗ್ರದ ಮೃಗಾಜಿನದಮೇಲೆ ಕುಳ್ಳಿರ್ದ್ದ ಮುದದಿಂ ||
ಪುಲಹನ ಪುಲಸ್ತ್ಯನ ವಸಿಷ್ಠನ ಮರೀಚಿಮು |
ದ್ಗಲನ ಕಶ್ಯಪನ ಕಣ್ವನ ವಿಭಾಂಡಕನ ದೇ |
ವಲನ ಗೋತ್ರದ ಋಷಿಗಳೊಡವೆರಸಿ ವಿಭ್ರಾಜಿಸಿದನು ಕಳಶಪ್ರಭವನು ||೨೬||

ಗಿರಿಕದಂಬದ ಮಧ್ಯದೊಳಗಿರ್ಪ ಮೇರುಭೂ |
ಧರದಂತೆ ಗಜನಿಚಯದೆಡೆಯೊಳಿಹ ಪುರ್ವದಿ |
ಕ್ಕರಿಯಂತೆ ಸಕಲಗ್ರಹಾಂತರಾಳದೊಳಿರ್ಪ್ಪ ತರುಣಸಪ್ತಾಶ್ವನಂತೆ ||
ಕರಮೆಸೆದ ನಂಬುಧಿಯ ನಾಪೋಶನಂಗೊಂಡು |
ವರುಣನಿಂ ತನ್ನ ಪೊಸರನ್ನದುಪಕರಣಮಂ |
ತರಿಸಿಕೊಂಡಪ್ರತಿಮಸಾಮರ್ಥ್ಯಯುತ ನಗಸ್ತ್ಯನು ಮುನಿಗಳೋಲೈಸಲು ||೨೭||

ಮಲಯಪರ್ವತದಿನಿತುವಿಭವಮಂ ನೋಡುತ್ತೆ |
ನಲವುಮಿಗಲಂಬರಸ್ಥಲದಿಂದೆ ಶಿವಸಿದ್ಧ |
ಕುಲದೀಪಕನು ವೀರಶೈವಸಂಸ್ಥಾಪಕನು ರೇವಣಪ್ರಭುರಾಯನು ||
ಇಳಿದುಬರುತಿರೆ ಕಂಡು ನಿರ್ಮಳಜ್ಞಾನನಿಧಿ |
ಕಳಶಸಂಭವನರಿದು ದಿಮ್ಮನೇಳಲು ಕರಂ |
ಗಳ ಮುಗಿದು ನಿಜಸಮೀಪಸ್ಥ ಋಷಿಗಳು ಬರ್ಪ್ಪರಾರೆಂದು ಬೆಸಗೊಂಡರು ||೨೮||

ಅವನಿಜಲಶಿಖಿವಾಯುಗಗನರವಿಶಶಿಯಾತ್ಮ |
ನಿವಹವೆಂದೆಂಬ ಮೂರ್ತಿಗಳು ಕಾಣಿಸದಖಿಳ |
ಭುವನಂಗಳುದ್ಭವಿಸದಂದಜಾಚ್ಯುತಮುಖ್ಯಸುರರು ಸಂಜನಿಸದಂದು ||
ಶಿವನು ತನ್ನಂತರಂಗದೊಳು ನೆಲೆವಡೆದೊಪ್ಪು |
ವವಿರಳಜ್ಞಾನಕಲೆಯಂ ನೆನೆಯ ಲೊಡನೆ ಸಂ |
ಭವಿಸಿ ಯತಿವೇಷದಿಂ ಮುಂದೆ ಕೈಮುಗಿದು ನಿಂದಿರಲು ಬಳಿಕಿಂತೆಂದನು ||೨೯||

ಸಕಲ ಜಗಮಂ ಸೃಷ್ಟಿಸುವೆ ನಿನ್ನು ಕೇಳು ನೀ |
ನಕಳಂಕಲೀಲೆಯಿಂ ದುಪದೇಶವಿತ್ತು ರೇ |
ಣುಕ ಗುರೂತ್ತಮನೆಂಬ ನಾಮಧೇಯದಿ ನಿಪ್ಪುದೆಂದು ಶಿವಧರ್ಮದಿರವಂ ||
ಪ್ರಕಟಿಸಿ ಕೃಪಾದೃಷ್ಟಿಯಿಂ ಪ್ರಮಥವೃಂದನಾ |
ಯಕಪದವ ನಿತ್ತನಾದಿಯೊಳಭವ ನಾತನೀ |
ಮುಕುತಿವೆಣ್ಣೆರೆಯನೆಂದೊರೆದನಾ ಋಷಿಗಳೊಳು ಕುಂಭಸಂಭವಮುನಿಪನು ||೩೦||

ಅವರು ಶಿವಲೋಕದಿಂದೀ ಧರಣಿಗೆಯ್ತಂದ |
ವಿವರವೇನೆನೆ ಶರಣಜನ ಮಹೋತ್ಸವ ಸದಾ |
ಶಿವನು ಧರೆಯೊಳು ವೀರಶೈವಧರ್ಮವ ಸಮುದ್ಧರಿಸೆಂದು ಬೆಸಸಲೊಡನೆ ||
ಅವತರಿಸಿ ಯಾಂಧ್ರದೇಶದ ಕೊಲ್ಲಿಪಾಕಿಯೊಳು |
ಶಿವಲಿಂಗದಿಂ ರೇವಣಾಸಿದ್ಧನಾಮಧೇ |
ಯವ ಧರಿಸಿ ಪಾವನಂಮಾಡಲೆಮ್ಮಂ ಬಂದರೆಂದವರ್ಗೆ ಮುನಿಪನುಸಿರ್ದಂ ||೩೧||

ಪೊಂಗೊಡನೊಳುದಯಿಸಿದ ಯತಿಯಿಂತು ಸಂಭಾಷ |
ಣಂಗೆಯ್ವಪದದೊ ಳಿಲರ್ವಟ್ಟಿಯೊಳು ಸರ್ವಾಂಗ |
ಲಿಂಗಿಗಳ ದೇವ ನನುಪಮ ಮುಕ್ತಿಪದವೀವ ನಭಿನವಶಿತಿಗ್ರೀವನು ||
ಮಂಗಳಾತ್ಮಕನೆರೇವಣೇಶ್ವರನು ಬರಲು ಸಾ |
ಷ್ಟಾಂಗದಿಂದೆರಗಿ ಮುನಿಗಳ್ವೆರಸಿ ಭೋಂಕನು |
ತ್ತುಂಗಪೀಠದೊಳಿರಿಸಿ ಯಡಿದೊಳೆದು ಪಾದೋದಕವನು ಶಿರದೊಳ್ಧರಿಸಿದಂ ||೩೨||

ಯಮುನೆ ನರ್ಮದೆ ಭೀಮರಥಿ ಕೃಷ್ಣವೇಣಿ ಗೌ |
ತಮಿ ಸರಸ್ವತಿ ಕವೇರಪ್ರಭವೆ ತುಂಗಭ |
ದ್ರೆ ಮಲಪ್ರಹಾರಿಣಿ ಕಪಿಲಕನ್ನೆ ಗಂಧವತಿ ಗಂಡಕಿ ಸುವರ್ಣಮುಖರಿ ||

ಅಮರನದಿ ಮುಂತಾದ ತೀರ್ಥಸಂಕುಲದಿ ನು |
ತ್ತಮವೆಂದು ರೇವಣೇಶ್ವರನ ಪಾದೋದಕವ |
ಘುಮಿಕದಂಬಂ ಸ್ವೀಕರಿಸಿ ಕೃತಾರ್ಥತೆವಡೆದೆವೆಂದೆಯ್ದೆ ಕೀರ್ತಿಸಿದರು ||೩೩||

ಮಾಡಿಸಿ ಶಿವಾರ್ಚನೆಯ ನಮೃತಫಲವಸ್ತುವಂ |
ನೀಡಿ ಕಟ್ಟೇಕಾಂತದಲ್ಲಿ ಕೈಮುಗಿದು ಪೆರೆ |
ಪೊಗಳಿದನ ಸುಜ್ಞಾನಸಂಜಾತ ರೇವಣಾಸಿದ್ಧೇಶ ದೇಶಿಕವರೇಣ್ಯ ||
ನಾಡೆ ವಿವರಿಸಿ ವೀರಶೈವಧರ್ಮಕ್ರಮವ |
ನೀಡಿರಿವ ಭವಭಯವ ತವಿಸೆಂದು ಕೈಮುಗಿದು |
ಬೇಡಿಕೊಂಡನು ನಿಗಮನಿಗಮಾಂಗಕೋವಿದ ನಗಸ್ತ್ಯನಾಸತಮಸ್ತನು ||೩೪||

ವೀರಮಾಹೇಶ್ವರಕ್ರಮ ವಿದಾಗಮನಿಗಮ |
ಸಾರ ಮತಿಗೋಪ್ಯ ಮತಿದುರ್ಲಭ ಮಪಾರವಿ |
ಸ್ತಾರ ಮತಿಶಯಕೃಪೆಯೊಳೆಮಗೆ ಶಿವನೊರೆದ ದಿವ್ಯಾಲಾಪಮುಕ್ತಿದೀಪಂ ||
ಘೋರತಾಪತ್ರಯ ನಿವಾರಣಂ ಚಿತ್ಸುಖಕೆ |
ಕಾರಣಂ ಸದ್ಧ್ಯಾನಧಾರಣ ಮೆನುತ್ತದಂ |
ಶ್ರೀರೇವಣಾಸಿದ್ಧಗುರು ಪೇಳಲೆಂದುಪಕ್ರಮಿಸಿ ಬಳಿಕಿಂತೆಂದನು ||೩೫||

ಆಮುನ್ನ ಪುಣ್ಯಮಂ ವಿರಚಿಸಿದ ರವಗೆ ಶಿವ |
ಧರ್ಮ ಸಂಭವಿಪುದಾ ಶಿವಭಕ್ತಿಯಿಂದಹುದು |
ಕರ್ಮಕ್ಷಯಂ ಬಳಿಕೆ ನಿಷ್ಕಾಮಪರತ್ವವಂತರ್ಮುಖವ ನಿಂಬುಗೊಂಬ ||
ನಿರ್ಮಲಿನಬುದ್ಧಿಯುಂಟಪ್ಪುದಂತಾಮತದ |
ಮರ್ಮವರಿಯಲು ಪ್ರಪಂಚಂ ಮಿಥ್ಯೆ ಶಿವತತ್ತ್ವ |
ವಸ್ತುವೆಂಬುದು ಕಾಣಿಸುವುದದರಿನಹುದು ಸನ್ಮುಕ್ತಿಪದ ವೆಂದರುಪಿದಂ ||೩೬||

ಶಿವತತ್ತ್ವವೇ ನಿತ್ಯವಸ್ತು ಸಕಲ ಪ್ರಪಂ |
ಚವನಿತ್ಯವಸ್ತುವೆಂಬುದನರಿದು ಶಮದಮಾ |
ದಿವಿಶೇಷವಿಭವದಿಂ ದಿಹಪರದ ಕಾಮ್ಯಾರ್ಥಫಲಭೋಗದಾಸೆಯೊರೆದು ||
ತವೆ ಮೋಕ್ಷವಂ ಬಯಸುವವನೆ ಸಾಧಕನೆನಿಪ |
ಶಿವಯೋಗಿಯೀನಾಲ್ಕುಗುಣವೆ ಸಾಧನವೆಂದು |
ವಿವರಿಸಿದ ನಾಖುಷಿಗೆ ಸುಜ್ಞಾನಮೂರ್ತಿ ಶಿವಸಿದ್ಧಕುಲಚಕ್ರವರ್ತಿ ||೩೭||

ದಾಸೋಹಮೆಂಬ ಭಾವವನೆ ಬಲಿದಾನೆಂಬು |
ದಾಸೀನಮಂ ಬಿಸುಟು ವೀರಶೈವಾಗಮುಮ |
ಹಾಸದಾಚಾರಂದಿಂ ಗುರುಲಿಂಗಜಂಗಮದೊ ಳೊಂದೇತೆರದ ಭಕ್ತಿಯಂ ||
ಲೇಸಾಗೊಡರ್ಚಿ ಶಿವಭಕ್ತರ್ಗೆ ಮಾಡಿ ಪರಿ |
ತೋಷದಿಂದಿಹುದದೇ ಭಕ್ತಸ್ಥಲಂ ಸವಿ |
ಶ್ವಾಸಮನದಿಂ ಕೇಳೆನುತ್ತೆ ಪೇಳಿದನು ತನ್ಮನಿಗೆ ಜಗದಾರಾಧ್ಯನು ||೩೮||

ಪರಸತಿಯ ಬಯಸದಂತಶ್ಶುದ್ಧನಾಗಿ ಶಂ |
ಕರನಿಷ್ಠೆಯುಂಟಾಗಿ ಸಚ್ಚಿದಾನಂದರಸ |
ಭರಿತಾತ್ಮನಾಗಿಹುದೆ ಮಾಹೇಶ್ವರಸ್ಥಲ ವನರ್ಪಿತದ್ರವ್ಯಂಗಳಂ ||
ಪರಿಹರಿಸಿ ಪಂಚೇಂದ್ರಿಯಂಗಳಿಂ ದೊದಗಿದುರು |
ತರಸೌಖ್ಯಮಂ ಪ್ರಾಣಲಿಂಗಕ್ಕೆ ಮನವೆಂಬ |
ಕರದಿ ನರ್ಪಿಸಿ ಭೋಗಿಸುವನೇ ಪ್ರಸಾದಿ ಯೆಂದೊರೆದ ನೆಪಡನೆಯಶಿವನು ||೩೯||

ಪ್ರಾಣಾದಿಪಂಚವಾಯುಗಳೊಡನೆ ಬೆರಸಿದಾ |
ಪ್ರಾಣಲಿಂಗವ ನೇಕಚಿತ್ತದಿಂ ಭಜಿಸುತ್ತೆ |
ಕಾಣುತ್ತೆ ಸುಖದುಃಖಮಂ ಸಾಮ್ಯಮಾಗಿ ಹರ್ಷವಿಷಾದಮೆಂಬುಭಯದ ||
ತಾಣವಾಗದೆ ಸಮಾಧಾನದಿಂದಿರ್ಪ್ಪುದೇ |
ಪ್ರಾಣಲಿಂಗಿಸ್ಥಲ ವಿದಧಿಕವೆಂದರಿಪಿದಂ |
ಜಾಣ ಶಿವಯೋಗಿ ಭಕ್ತಜನಾನುರಾಗಿ ಮುಕ್ತಿಯಚಾಗಿ ತನ್ಮನಿಯೊಳು ||೪೦||

ಪತಿಯೇ ಸದಾಶಿವನು ಸತಿಯೆ ತಾನೆಂದೆಂಬ |
ಮತಿವಂತನಾಗಿ ಸಕಲಪ್ರಪಂಚದ ಸುಖವ |
ನತಿಗಳೆದು ನಿಂದುದೇ ಶರಣಸ್ಥಲಂ ಷಡೂರ್ಮಿಗಳ ಷಡ್ದ್ರವ್ಯಂಗಳ ||
ತತಿಗಿನಿಸು ಸಿಲ್ಕದೆ ನಿಜಾಂತರಂಗದೊಳು ಪಶು |
ಪತಿಪು ನವಗವಿಸಿ ಶಿವಿಕರ್ಪೂರಯೋಗದಿಂ |
ದತಿಶಯಂ ಬೆರಸುವುದೆ ಶಿವನೊಳೈಕ್ಯಸ್ಥಲವೆನುತ್ತೆ ದೇಶಿಕನೊರೆದನು ||೪೧||

ಭಕ್ತಿ ಕರ್ಮಕ್ಷಯಂ ಪರಶಿವಜ್ಞಾನಾಭಿ |
ಯುಕ್ತಿ ನಿತ್ಯಾನಿತ್ಯವಸ್ತುಸುವಿವೇಕಾನು |
ರಕ್ತಿ ಬಳಿವಿಡಿದಹಂಕಾರಕ್ಷಯಂ ಸಚ್ಚಿದಾನಂದ ವಿಂತಿಪಸಿತು ||

ವ್ಯಕ್ತವಹುದೀಸ್ಥಲಂಗಳ ನೆಸಗಲೆಂದು ಮಧು |
ರೋಕ್ತಿಯಿಂ ಪೇಳಿದಂ ಕುಂಭಸಂಭವನೊಡನೆ |
ಭಕ್ತಜನದುರಿತಾಪಹರಣ ನಾಚಾರ್ಯಕುಲಕೈರವಸುಧಾಕಿರಣನು ||೪೨||

ಸ್ಥಲವಾರ ನೀತೆರದಿ ಪೇಳಿ ತನ್ಮನಿಚಿತ್ತ |
ನಳಿನವ ವಿಕಾಸವೆಯ್ದಿಸಿ ಬೀಳ್ಕೊಂಡು ನಿ |
ರ್ಮಳಚರಿತರೇವಣಾಸಿದ್ಧೇಶ್ವರನು ಸಕಲಮುನಿಜನಂಗಳ ಮನ್ನಿಸಿ ||
ಮಲಯಾದ್ರಿಯಿಂದೆ ನೆಗೆದಾಕಾಶಮಧ್ಯದೊಳು |
ತಳರ್ದುನಡೆತರುತಿರಲು ಬಳಿಕ ಮುನ್ನೀರು ಕಂ |
ಗೊಳಿಸಿದುದು ಮೈನಾಕಮುಖ್ಯಕುಲಗಿರಿಯ ನೊಳಕೊಂಡೆಯ್ದೆ ಗುಣ್ಪಿನಿಂದೆ ||೪೩||

ನಡೆವುತಿಹ ಪಡಗುಗಳ ಗಡಣದಿಂ ಪೊಳೆದಾಡು |
ವಿಡಿಕಿಂದ ನಕ್ರಕಮಠಾದಿಜಲಚರದ ವಂ |
ಗಡದಿ ನುಪಕಂಠಭೂಮಿಗೆ ಬಹುಪ್ರಭೆಯ ಬೀರುವ ಪಲವುರನ್ನದಿಂದೆ ||
ಕಡುಸೊಗಯಿಸುವ ತಂಕಗಡಲ ಮಧ್ಯದೊಳು ಪಗ |
ಲೊಡೆಯನನ್ವಯದ ರಾಘವನು ಸೇತುವ ಕಟ್ಟಿ |
ದೆಡೆಯೊ ಳೊಪ್ಪುವ ರಾಮನಾಥನ ಶಿವಾಲಯವ ಸಿದ್ಧೇಶ್ವರಂ ಕಂಡನು ||೪೪||

ಎಲರಣುಗ ನಮರನದಿಯಿಂ ಲಿಂಗಮಂ ತಹುದು |
ತಳುವಾಗೆ ಶುಭಮೂಹೂರ್ತದೊಳು ರಘುನಂದನಂ |
ಮಳಲೊ ಳೊಡರಿಚಿ ಪೂಜಿಸಿದ ರಾಮನಾಥಶಿವಲಿಂಗಮಂ ಕಾಶಿಯಿಂದೆ ||
ಬಳಿಕ ಹನುಮಂತ ತಂದರ್ಚಿಸಿದ ಲಿಂಗಮಂ |
ನೆಲನಮಗ ಳಮರಿಚಿದ ವಾಲುಕದನೂನಮಂ |
ಜುಳವೃಷಭಮೂರ್ತಿಯಂ ಕಂಡನಾ ರೇವಣಾಸಿದ್ಧ ಜಗದಾರಾಧ್ಯನು ||೪೫||

ಇದು ರಾಘವೇಶ್ವರನು ಲಂಕಾಧಿಪತಿಯ ವಧಿ |
ಸಿದ ದೋಷವೋದ ಪುಣ್ಯಕ್ಷೇತ್ರವೆನುತೆ ನಮಿ |
ಸಿದ ಜನಂಗಳಿ ಗಿಹಪರದ ಸುಖವ ನೀವುತಲ್ಲಿಂ ಪವನಪಥಕೆ ನೆಗೆದು ||
ಮುದದಿಂದೆ ಕರೆವಳಿಯ ಪಟ್ಟಣಂಗಳ ಸುಸಂ |
ಪದವ ನೀಕ್ಷಿಸುತೆ ಬರುತಿರೆ ಬೆಸಗಿನಿಂದೊಪ್ಪಿ |
ದುದು ಚೋಳಮಂಡಲಂ ಭೂಸ್ವರ್ಗವಿದು ತಾನೆನಿಪ್ಪಂತೆ ಸೊಬಗುವಡೆದು ||೪೬||

ಪೊಂಬಾಳೆಗಳ ಕಂಪನುಂಬ ಮರಿದುಂಬಿಗಳ |
ಬಂಬಲಡಿದಳದೊಳಂಟಿದ ರಜದ ರವೆ ಮುಸುಕಿ |
ದಂಬುವಿನೊಳಾಡುವರ ಸಂಚೆಗಳ ಪಜ್ಜೆಯಿಂದೆಸೆವ ಪೆರ್ಮಡುಗಳಿಂದೆ ||
ತೊಂಬೆಗೊನೆಗಳ ಪಣ್ತೊಡಂಬೆಗಳ ಮೆಲ್ದು ನಲ |
ವಿಂ ಬೀಗಿ ನುಡಿವ ಗಿಳಿವಿಂಡಿರ್ದ್ದ ಮಾಮರಗ |
ಳಿಂ ಬಗೆಗೆ ಸೊಗಸ ನೊದವಿಸುತಿರ್ದ್ದುದಾದೇಶ ರೇವಣಾಸಿದ್ಧೇಶನ ||೪೭||

ಆವಿಷಯದೆಡೆಯೊಳಾ ಗುರುನಾಥನಿದಿರಲ್ಲಿ |
ದೇವದೇವೇಶನಾನಂದತಾಂಡವದ ಲೀ |
ಲಾವಿಗ್ರಹಂ ವಿರಾಜಿಸುವ ಘಟಿಕಾಸ್ಥಾನ ವಗ್ಗಳಂ ತೇನತೇನಂ ||
ತಾವರೆಯ ಕೆಳೆಯನ ಕುಲೋದ್ಧರಣರೆಂದೆನಿಪ |
ಭೂವಲ್ಲಭರಿಗೆ ಚೋಳರಿಗಿಷ್ಟಫಲವಿತ್ತ |
ತಾವು ಪೊನ್ನಾಂಬಲಂ ನಂಬಿದಾನತಜನದ ನೆಂಬಲಂ ಚೆಲ್ವಾದುದು ||೪೮||

ಶ್ರೀಸದಾಶಿವನ ನಿತ್ಯೋತ್ಸವನ ಪೊನ್ನಾಂಬ |
ಲೇಶನ ಸಮಾರಾಧನೆಯ ಮಾಳ್ಪುದಾತ್ತ ಶಿವ |
ಭೂಸುರಾಧಿಪರು ಮುಚ್ಚಾಸಿರ್ವರಿಹ ಕನಕಮಯ ಮಾಟಕೂಟಂಗಳಂ ||
ಭಾಸುರಜ್ಞಾನಮೂರ್ತಿಗಳು ನಾಲ್ವತ್ತೆಂಟು |
ಸಾಸಿರ ವಿಶೇಷ ಮಾಹೇಶ್ವರರ ಘನಕನಕ |
ಪ್ರಾಸಾದಸಂಕುಳಂಗಳ್ನೆಕಂಡನಾ ಪ್ರಮಥಗುರು ವಿನತಜನಸುರತರು ||೪೯||

ಮುನ್ನೊರ್ವ ನಮರನದಿಯೊಡಗೂಡಿಸುವೆನೆಂದು |
ತನ್ನಪಿತನಸ್ಥಿಯಂ ಪೊತ್ತುಕೊಂಡುಯ್ಯುತಿರೆ |
ಪೊನ್ನಾಂಬಲದೊಳಿರ್ದ್ದ ಮರುದಿನಂ ಪೋಗುತ್ತೆ ಕಾವಡಿಯ ತೆರೆದುನೋಡೆ ||
ನನ್ನಿಮಿಗೆ ಮಲ್ಲಿಗೆಯರಲ್ಗಳಾಗಿರೆ ಕಾಶಿ |
ಯಿನ್ನಿಟ್ಟಸುವೊಡಿದೇ ಮಿಗಿಲೆಂಬ ತೀರ್ಥಕುಂ |
ಡನ್ನೆಟ್ಟನೊಪ್ಪುತಿರ್ದ್ದುದು ಗುರೂತ್ತಮನ ದಿಟ್ಟಿಗೆ ಶಿವಮತದ ಗಟ್ಟಿಗೆ ||೫೦||

ನೋಡುತ್ತೆ ಬಂದು ಶಶಿಚೂಡಾಮಣಿಯ ಭವನ |
ದಾಡಂಬರಕ್ಕೆ ಸಂತಸಬಟ್ಟು ಭಕ್ತಿಯಂ |
ಮಾಡುವರ್ಗ್ಗಿಷ್ಟಾರ್ಥಸಿದ್ಧಿಯಂ ಕೈಸಾರ್ಚಿ ನಿಜಕರಸ್ಥಲಲಿಂಗವಂ ||

ನೋಡುತಾನಂದಾಶ್ರುವೊಡವೆರಸಿ ಪೂಜೆಯಂ |
ಮಾಡಿ ಮುನ್ನಿನ ಶರಣರಾಡಿಸಿದ ತಾಂಡವವ |
ನೋಡಿ ನೆಗೆದಂ ನಭಕೆ ಪರಮಶಿವಸಿದ್ಧಾಂತ ಸರ್ವಸ್ವದಾಕಾರನು ||೫೧||

ತಿರುವಡಮರಂದೂರು ಕುಂಭಕೋಣಂ ಪೆರುಂ |
ದೊರೆ ಪೆಣ್ಣೆನಲ್ಲೂರು ತಿರುವಲಂಜೂಳಿ ಯಜ |
ಪುರ ತಿರುಚಿಲಾಪಳ್ಳಿ ತಿರುವಾನೆಕಾಪು ತಿರುವಯ್ಯಾರು ತಂಜಾವರಂ ||
ತಿರುವಾಲನಗರಿ ತಿರುವಾರೂರು ಮುಂತಾದ |
ಹರಪುರಂಗಳ ಪೊಕ್ಕು ಶಿವಧರ್ಮಲತೆಯ ಕುಡಿ |
ವೆರಸುತ್ತೆ ಗುಪ್ತದಿಂ ಸುಳಿದನಾ ರೇವಣಪ್ರಭು ಚೋಳಮಂಡಲದೊಳು ||೫೨||

ವೀರಶೈವಾಗಮಾಚಾರ ಸ್ಥಲಾಧಿಪತಿ |
ಕಾರುಣ್ಯನಿಧಿ ಬಾಲಸಿದ್ಧಯೋಗೀಂದ್ರನೊಸೆ |
ದೋರಂತೆ ಶರಣಜನ ಪೊಗಳೆ ಪೇಳಿಸಿದ ಸಿದ್ಧೇಶ್ವರ ಪುರಾಣದೊಳಗೆ ||
ಮಾರಾರಿಯಣುಗ ಮಲಯಾದ್ರಿ ರಾಮೇಶ್ವರವಿ |
ಹಾರಮಂ ಮಾಡಿ ನೆರೆ ಚೋಳದೇಶದ ಜನವಿ |
ಚಾರಕ್ಕೆ ಕಾಣಿಸದೆ ಸುಳಿದ ಶುಭಕಥನವಿಂತಿದುವೆ ನಾಲ್ಕನೆಯಸಂಧಿ ||೫೩||

## ನಾಲ್ಕನೆಯ ಸಂಧಿ ಮುಗಿದುದು.



ಶಂಭವೇ ನಮಃ.

## ಅಯ್ದನೆಯ ಸಂಧಿಯು.

ಸೂ || ಚೋಳಂಗೆ ವರವಿತ್ತು ವಿಕ್ರಮಾದಿತ್ಯನಂ |
ಪಾಲಿಸಿ ಬಳಿಕ್ಕ ಮಂಗಳವಾಡಮಂ ಪೊಕ್ಕು |
ತೈಲಿಕಗೆ ಕೃಪೆಗೆಯ್ದು ಪೂರ್ವದೇಶಿಕನು ಮಾಯ್ದೇವಿಯರ ಗೃಹದೊಳಿರ್ದಂ ||

ವಾಣ್ಯಮೃತವಾರ್ಧಿಕನ್ಯಾರಮಣಪೂಜಿತ ಷ |
ರಣ್ಯಾದ್ರಿಕೋದಂಡ ಕಾತ್ಯಾಯನೀಸುತಾ |
ರಣ್ಯಮಾಕಂದಪಲ್ಲವರಾಜಕೀರ ನತಜನ ಜನನಕುಜಕುಠಾರ ||

ಫಣ್ಯಾಭರಣ ಭರ್ಗ ಸಂಸಾರಸಾಗರತ |
ರಣ್ಯಾಯಮಾನ ಪಾವನನಾಮಧೇಯ ಕಾ |
ರುಣ್ಯನಿಧಿ ವೃಷಭವಾಹನ ಶಾಂತಮಲ್ಲಿಕಾರ್ಜುನಲಿಂಗ ಪಾಲಿಸೆಮ್ಮಂ ||೧||

ಚೋಳಮಂಡಲದಿಂದೆ ಪೊರಮಟ್ಟು ಬಾಳೆ ಕಿ |
ತ್ತಿಳೆ ಪೇರೀಳೆ ಪಲಸಡಕೆ ನೇರಿಲು ತೆಂಗು |
ನಾಳಿಕೇರಂಗಳಿಡಿಕಿರಿದ ಭೂಜಂಗಳಿಂ ಗಂಧಶಾಲಿಯ ಮಡಿಗಳಿಂ ||
ಸೋಲೆ ನಭವಂ ಜಕ್ಕುಲಿಸಿ ಬಳೆದಪುಂಡ್ರೇಕ್ಷು |
ಜಾಳದಿಂದೆಸೆವ ತುಂಡೀರಮಂಡಲದಿರುವ |
ನಾಲೋಕನಂಗೆಯ್ಯಲೆಂದು ಪೊಕ್ಕಂ ರೇವಣಾಸಿದ್ಧಯೋಗಿಶನು ||೨||

ಸೆಲದಿಗೆಲರುಣಿ ಗಿಭಕೆ ಕಣ್ಣಪ್ಪದೇವಗು |
ಜ್ಜ್ವಲಶೈವಶಿವಗೋಚರಂಗೆ ನಕ್ಕೀರಂಗೆ |
ಲಲಿತಾಂಗಿಯುಗ್ಗ್ರಪುರಪಧುಗಳ್ಗೆ ಸಾಯುಜ್ಯಪದವಿಯಂ ಕೈಸಾರ್ಚಿದ ||
ಇಳೆಯೊಳುನ್ನತಿವಡೆದ ಕಾಳಹಸ್ತೀಶ್ವರನ |
ನಲವಿನಿಂ ನೋಡುತ್ತೆ ಬಂದು ಪೊಕ್ಕಂ ಜೀರ್ಣ |
ಮಲಿನಕಂಥೆಯ ಧರಿಸಿ ಮರುಳಂತೆ ಪೊಳಲನಾ ಸಕಲಸಿದ್ಧಿಗಳಾಣ್ಮನು ||೩||

ಶ್ರೀಗೆ ನೆಲೆಯಾಗಿದ್ರ್ದಪಾಕಾಂಚಿ ಯುತ್ತರದ |
ಬಾಗಿಲಮರೇಂದ್ರಪುರ ಪೂರ್ವದಿಕ್ಕಿನೊಳೆಸೆವ |
ಬಾಗಿಲೇ ತಿರುನೀಲಕಂಠಪುರ ಪಶ್ಚಿಮದ್ವಾರ ತಿರುಪೊಕ್ಕಳೂರು ||
ಭೋಗಯೋಗ್ಯಸ್ಥಾನ ಮೆನಿಪ ದಕ್ಷಿಣದಿಶೆಯು |
ಬಾಗಿಲೇ ಪಲ್ಲವನಗರಿಯೆನಿಸಿ ಪೆಂಪಿನಿಂ |
ದೇಗಳುಂ ಪರಮಧರ್ಮಾಮೃತಂ ಸಂಭವಿಸಿದಿಂಗಡಲಿದೆಂಬಂತಿರೆ ||೪||

ಬಿಡದೆ ಪರಿವುತ್ತಿರ್ಪ್ಪ ನದಿಗಳೀರೆಂಟು ಜಗ |
ದೊಡತಿ ಕಾಮಾಕ್ಷಿಯಿಹ ಪಾತಾಳಗೃಹವೊಂದು |
ಮೃಡನ ಮಣಿಮಾಡವೀರೇಳಿಸ್ಸಿರಿಂ ಪಾಶುಪತ ಮಹಾವ್ರತಿಗಳಿರ್ಪ್ಪ ||
ಕಡುಸೊಂಪುವಡೆದ ಮಠ ವೀರಾರುಲಕ್ಷವಿ |
ನ್ನಿಡಿಕಿರಿದ ಗುಡಿಗಟ್ಟುಗಳನು ದೇವಾಲಯದ |
ಗಡಣಗಳನಿನಿತೆಂದು ಬಣ್ಣಿಸುವನಾವನೆನೆ ಲೊಪ್ಪಿತಾ ಕಾಂಚೀಪುರಂ ||೫||

ಪಂಚತೀರ್ಥಂ ಋಷಿಚತುಷ್ಟಯಂ ಸಾರ್ವತ್ರುರ್ಜ |
ಕಂ ಚಾರುತರವೃಕ್ಷ ವೀರೈದು ಭೂದೇವ |
ಸಂಚಯಂ ಲಕ್ಷತ್ರಯಂ ಸ್ವರ್ಗಲೋಕಗಾಮಿಗಳೆಂಬುವಾರುಪಕ್ಷಿ ||
ಪಂಚಭೂತಂ ವೇದಿಕಾತ್ರಯಂ ಪರಮಲಿಂ |
ಗಂ ಚತುರ್ದಶಮೊಪ್ಪುತಿರೆ ಸೊಗಯಿಸಿರ್ದುದಾ |
ಕಾಂಚಿ ನೆಲವೆಣ್ಣಿಟ್ಟ ಕಾಂಚಿ ಯೆಂಬಂತೆ ಪಿರಿದುಂ ಚೆಲ್ವನಿತ್ತು ಬಗೆಗೆ ||೬||

ಇಂತೆಸೆವ ಕಾಂಚೀಪುರಾಂತರಾಳದೊಳು ನಿ |
ಶ್ಚಿಂತ ನಶ್ರಾಂತ ನತ್ಯಂತೋಪಶಾಂತಂ ನಿ |
ರಂತರಾಯೈಶ್ವರ್ಯಕಾಂತನೆನಿಸುವ ರೇವಣಸಿದ್ಧ ಗುರುನಾಥನು ||
ಅಂತಕಾಂತಕನು ನಿಗಮಾಂತಾರ್ಥರೂಪ ನೋ |
ರಂತೆ ಸಂತಸದಿ ಸುಳಿದನು ಬಾಲನಂತೆ ವಿ |
ಭ್ರಾಂತನಂತುನ್ಮತ್ತನಂತೆ ಲೌಕಿಕಜನಕೆ ಕಾಣಿಸುತೆ ಬಿನದದಿಂದೆ ||೭||

ಮರುಳಂತೆ ನೋಟಕರ ಮನಕೆ ಪರತತ್ತ್ವದೊ |
ಳ್ದಿರುಳಂತೆ ಶರಣರಾಲೋಚನೆಗೆ ಶಿವಮತದ |
ಪುರುಳಂತೆ ವರಶಿವೈಕ್ಯರ ಬಗೆಗೆ ನಾಡೆ ಸಾಂಸಾರಿಕಭ್ರಮೆಯ ಬೀರಿ ||
ಹರನ ನೆಲೆಗಾಣಿಸಿ ಸದಾನಂದವಿಜ್ಞಾನ |
ದಿರವ ತಲೆದೋರಿಸಿ ವಿಲಾಸದಿಂ ರೇವಣೇ |
ಶ್ವರನು ಪಿಣ್ಣಾಕನಾಯ್ನಾರೆಂಬ ನಾಮಧೇಯದಿ ನೊಪ್ಪುತಿರ್ದನಲ್ಲಿ ||೮||

ಪಳಗಂಬಳಿಯ ಪೊದಕೆಯುಂ ಜಟೆಯ ತಲೆಸುತ್ತು |
ಮಲಿನದೇಹಂ ಬೆಳರ್ತೆಸೆವ ಬಾಯ್ದೆರೆ ಪುದಿದು |
ಬಳೆದ ಮುಖರೋಮ ವೆತ್ತರತತ್ತರಂಬಡೆದ ಮಾತು ಮಿಗೆ ಗಹಗಹಿಸುವ ||
ಬೆಳುನಗೆ ನಿರೀಕ್ಷಿಪರ ದಿಟ್ಟಿಗತಿ ಪೊಸತಾಗೆ |
ಸುಳಿದನಾ ಕಾಂಚಿಯೊಳು ಭಕ್ತಿಭಿಕ್ಷೆಯನೆ ಕೈ |
ಕೊಳುತೆ ಪೈಶಾಚಿಕಾಕಾರದಿಂ ರೇವಣಸಿದ್ಧ ಶಿವಯೋಗೀಂದ್ರನು ||೯||

ಶಿವನಿಳಯವೆಲ್ಲಿರ್ದುದಲ್ಲಿ ನಿಂತಿಷ್ಟಲಿಂ |
ಗವನರ್ಚಿಸುತೆ ತುತಿಸುತಡಿಗಡಿಗೆ ವಂದಿಸುತೆ |
ಶಿವಶಿವೆಂದೆನುತತಿಶಯ ಭ್ರಾಂತಿವಿಡಿದಂತೆ ಶಿವಯೋಗಿಗಳ ದೇವನು ||

ಶಿವಶರಣರಿರಿದು ತಲೆದೂಗುತಿರೆ ಲೌಕಿಕಜ |
ನವ ನೇಡಿಸುತೆ ಮಾಯೆಯಂ ಮಗ್ಗಿಸುತೆ ಪರಾ |
ಭವಿಸುತ್ತೆ ಮದನನಂ ಸುಳಿದಾಡುತಿರ್ದ್ದ ನೆಡೆವರಿಯದಾನಂದದಿಂದೆ ||೧೦||
ಅದನು ಕಂಡಾಪೊಳಲ ವೈಷ್ಣವಜನಂ ಎನೋ |
ದದಿ ಪಿಡಿದುಕೊಂಡುಬಂದಲ್ಲಾಳನಾಥನಿಹ |
ಸದನಕ್ಕೆ ವಂದಿಸೆಮ್ಮಯ ದೈವಕೆಲೆಮರುಳ ವಹಿಲದಿಂದೆನಲು ಕೇಳಿ ||
ಬೆದರುತ್ತೆ ಬೆಮರುತ್ತೆ ಬೆಚ್ಚುತ್ತೆ ವಿಷ್ಣುವಿನ |
ಪದಕೆರಗ ಲೀದ್ದೈವವೆಂತಹುದೊ ಬೇಡಬೇ |
ಡಿದರಸಿಂತೆನುತವರ ಬೇಡಿಕೊಂಡನು ಯತೀಶ್ವರ ಮಕುಟಮಾಣಿಕ್ಯನು ||೧೧||
ಬೇಡಿಕೊಂಡರೆ ಬಳಿಕ ಘನವಾದುದಾಮರುಳ |
ರಾಡುವಾಟಂ ಬಳಿಕ ನಸುನಗುತೆ ತಲೆಯನ |
ಲ್ಲಾಡಿ ದೇಗುಲದಿಂದೆ ಪೊರಮಟ್ಟ ದೃಶ್ಯನಾಗಲು ರೇವಣಾಸಿದ್ಧನು ||
ಕೂಡೆ ವಿಷ್ಣುಪ್ರತಿಮೆಯದ್ಭುತವ ನೆಸಗಿ ಯ |
ಲ್ಲಾಡುತಿರ್ದ್ದುದು ಕಾಣುತಾ ವೈಷ್ಣವಪ್ರತತಿ |
ಯೋಡಿದುದು ನಿಜನಿವಾಸಕ್ಕೆ ದೈವದ್ರೋಹವಾಯ್ತೆಂದು ನಡನಡುಗುತೆ ||೧೨||
ಗುರುವರನಿ ನಿಂತಾದ ವೃತ್ತಾಂತಮಂ ನರೇ |
ಶ್ವರಗೆ ವಿಜಯೇಂದ್ರಚೋಳಂಗೆ ಪೇಳದೆ ಸುಮ್ಮ |
ನಿರಲು ತದ್ವೈಷ್ಣವಪ್ರತತಿ ಪೂಜಕನಿಚಯವೆಯ್ತಂದು ಮಹಿಪನೆಡೆಗೆ ||
ಸರಸಿಜಾಕ್ಷಪ್ರತಿಮೆ ಯಲ್ಲಾಡುತಿರ್ದ್ದಪುದು |
ಕರಮಿದಚ್ಚರಿ ಯಿದಂ ಸುಪ್ರತಿಷ್ಠಿತಮಾಗಿ |
ವಿರಚಿಸಲ್ವೇಳ್ಕೆಂದು ಬಿನ್ನೈಸೆ ಮುಳುಗಿದಂ ಚಿಂತೆಗಡಲೊಳಗರಸನು ||೧೩||
ಗಳಿಗೆಪರ್ಯಂತ ವಿಸ್ಮಿತಚಿತ್ತನಾಗಿರ್ದ್ದ |
ಬಳಿಕಲಿನ್ನಾವಪರಿಯಿಂದೆ ದೊರಕೊಂಡುದೋ |
ಜಲಜನಾಭಪ್ರತಿಮೆಗತ್ಯಂತ ಕಂಪನವೆನುತ್ತಲಾ ಸಭೆಯ ಕೇಳಿ ||
ತಿಳಿಯಲರಿಯದೆ ಮಂತ್ರಿಗಳ ಮುಖವ ನೋಡಲಿದ |
ಕೆಳುಕಲೇಕರಸ ಶಾಸ್ತ್ರಾಗಮಜ್ಞರ ಕರಸಿ |
ಲಿಸುವ ಮಹೋಪಶಾಂತಿಯನೆಸಗಿ ನಿಶ್ಚಯಿಸಿದೀಗ ಮತವೆಂದೊರೆದರು ||೧೪||

ಬರಿಸೆ ನಿಜಮಂತ್ರಿಗಳ ಮಾತುಗೇಳ್ದಾಕ್ಷಣಂ |
ಧರಣಿಪತಿ ವಿಜಯೇಂದ್ರಚೋಳ ಸಾಮ್ನಾಯನಿವು |
ಗುರನು ವೈಷ್ಣವಭಾಗವತ ಪಾಂಚರಾತ್ರಿಕರೊಳತ್ಯಧಿಕರೆಂದೆನಿಪರಂ ||
ಪರಿಸಿ ಕುಳ್ಳಿರ್ದ್ದವರು ಶಾಸ್ತ್ರಂಗಳಂ ನೋಡಿ |
ಸಿರಿಯೊಣ್ಮನಲ್ಲಾಟ ನಿಂದಪುದು ಜಪಹೋಮ |
ವಿರಚನೆಗಳಿಂದೆನಲು ಮಾಡಿಸಿದ ನನಿತ ನವನೀಶ್ವರಂ ವಿಪ್ರರಿಂದೆ ||೧೫||

ಏನನೊಡಂಚಿದೊಡಂ ಮಾಣದಚ್ಯುತವಿಗ್ರ |
ಹಾನುಕಂಪನ ವದಕ್ಕೆಂತೆನುತೆ ಬಳಿಕಲಾ |
ಭೂನಾಥನಾದಿ ಶೈವಾಚಾರ್ಯರಂ ಕರಸಿ ಪರಿಮಿತದೊಳಭಿವಂದಿಸಿ ||
ಜ್ಞಾನದಿಂದೀಸ್ಥಿತಿಯ ನರುಹಲಾ ಗುರುಗಳು ಭ |
ವಾನಿ ಯೇಕಾಮ್ರನಾಥನ ನೊಲಿಸಿದುದುಮಿದು ನಿ |
ದಾನಿಸುವೊಡೊಂದೆ ಶತಕೋಟಿ ಪುಣ್ಯಗಳಪ್ಪುವೀ ಕ್ಷೇತ್ರದೊಳಗೆಂದರು ||೧೬||

ಈಕಾಂಚಿಗಧಿದೇವಿ ಕಾಮಾಕ್ಷಿ ತದ್ರಮಣ |
ನೇಕಾಮ್ರನಾಥಶಿವ ನಾತನಂ ಭಜಿಸಿದೊಡ |
ನೇಕಸಿದ್ಧಿಗಳಪ್ಪುವೆಂದು ಶೈವಾರಾಧ್ಯರುಸಿರಲನುರಾಗದಿಂದೆ ||
ಏಕಿಲ್ಲಿ ಗಿರಿಜಾತೆ ತಪಮಿರ್ದ್ದಳೀಶ್ವರಂ |
ಗೀ ಕಥಾವೃತ್ತಾಂತಮಂ ಪೇಳಿಮೆಂದು ಧರ |
ಣೀಕಾಂತ ನತ್ಯಧಿಕಭಕ್ತಿಯಿಂದಾಲಿಸಿದನೇಕಾಗ್ರಚಿತ್ತದಿಂದೆ ||೧೭||

ಸಮಯವರಿಯದೆ ಮುನ್ನ ರುದ್ರಾಣಿ ಮಸುಮುನಿಗ |
ಳಮರಿಹ ವೇಳೆಯೊಳು ಲೀಲೆಯಿಂ ವೃಷಭೇಂದ್ರ |
ಗಮನನ ಮನೋಜಮದಶಮನನ ಸದಾಶಿವನ ಕಣ್ಗಳಂ ಮುಚ್ಚಲೊಡನೆ ||
ತಿಮಿರವಾವರಿಸೆ ಲೋಕತ್ರಯವ ನಳುಕಿನಿಂ |
ಕ್ಷಮಿಸಿ ಸರ್ವೇಶ ಬೆಳಗಂ ಪಸರಿಸೆಂದು ಬಳಿ |
ಕುಮೆ ದೈನ್ಯದಿಂ ಬೇಡಿಕೊಳಲೆಂದು ಕಾಳಿಯಾಗೆಂದು ನೇಮವನಿತ್ತನು ||೧೮||

ಮಲಿನಾಂಗಿಯಾಗಿ ಮಾದೇವಿ ಯೆನಗೆಂತು ನಿ |
ರ್ಮಳಕಾಯವಪ್ಪುದದಂ ಕಂಳಂ ನಿರೂಪವಿ |
ತ್ತಿಳಪತಿನಿಂ ಕಾಯ್ವುದು ಪೊಡಮಡಲು ಕಾಂಚಿಯ ಮಹಾಕ್ಷೇತ್ರದಲ್ಲಿ ತಪವ ||

ಇಳೆಯರಿಯಲೆಸಗೆಂದು ಶಿವೆಯ ಬೀಳ್ಕೊಟ್ಟು ಪೆ |
ರ್ಮೈಳಗ ನಂಬುಜಭವಾಂಡದೊಳು ನೆರೆ ಕರೆದನು |
ಜ್ಜ್ವಲಪರಂಜೋತಿಸ್ಸ್ವರೂಪನು ದಯಾವಾರ್ಧಿ ತಾಪತ್ರಯಾಪಹರನು ||೧೯||

ತಾರಾದ್ರಿಯಿಂದಿಳಿದನೇಕಶಕ್ತಿಗಳುಸಹಿ |
ತೋರಂತೆ ಗಿರಿಸುತೆಯುದಗ್ರಧರ್ಮಂಗಳಂ |
ಸೇರುವೆಯಮಾಡಿ ಮಾಕಂದವೃಕ್ಷದ ಕೆಳಗೆ ಮಳಲ ಲಿಂಗವನೊಡರಿಚಿ ||
ಆರಾಧಿಸುತ್ತಿರ್ದೊಡಲ್ಲಿ ತಪದಿರವ ನಿ |
ನ್ನಾರಯ್ಯಬೇಕೆಂದು ಶಿವನು ಕಳುಪಿದೊಡೆ ಭೋ |
ಭೋರನೆಯ್ತಂದುದು ತರಂಗಿಣೀಸಮುದಯಂ ಮೇನಕಾತ್ಮಜೆಯಮೇಲೆ ||೨೦||

ಅದಕಂಜದಗಜೆ ಶಿವಲಿಂಗಮಂ ಬಿಗಿಯಪ್ಪಿ |
ಪದೆಪಿನಿಂ ದೃಢದೊಳಿರೆ ಗೌರಿಯಾಗೆಂದು ಸ |
ನ್ಮದದಿಂದೆ ವರವ ಬೇಡೆನಲು ಎಲೆದೇವ ನಿಮಗರ್ಧಾಂಗಿಯಾಗೊಪ್ಪುವ ||
ಪದವ ನೀಂ ಕರುಣಿಸೆನಲಂತದಂ ಪಡೆದಳಂ |
ತದುನಿಮಿತ್ತಂ ಕಾಮಿತಾರ್ಥಸಿದ್ಧಿಯನು ಮಾ |
ಳ್ಪುದು ಮಹಾದೇವನರ್ಚನೆಯೆಂದು ಶೈವದೇಶಿಕರೊರೆದರಾ ನೃಪನೊಳು ||೨೧||

ಬೀಳುಕೊಟ್ಟಂ ದೇಶಿಕೇಂದ್ರರನು ವಿಜಯೇಂದ್ರ |
ಚೋಳ ಸಾದರದಿ ಬಂದೇಕಾಮ್ರನಾಥಂಗೆ |
ಲೀಲೆಯಿಗೆ ಪಂಚಾಮೃತಾಭಿಷೇಕವನು ಮಾಡಿಸಿ ಸುಗಂಧದ್ರವ್ಯವಂ ||
ಆಲೇಪನಂಗೆಯ್ಸಿ ಸಕಲೋಪಚಾರಮಂ |
ಮೇಳಯಿಸಿ ನವರತ್ನಕೀಲಿತಸುವರ್ಣಪ್ರ |
ಭಾಳೀಖಿಯಿಂದಲಂಕರಿಸಿ ಶಿವಶರಣಜನಕಾರಾಧನೆಗಳನಿತ್ತು ||೨೨||

ಶಶಿಧರನ ನೆರ್ದೆವನೆಯೊಳಿಂಬಿಟ್ಟು ನಳನಳಿಪ |
ಕುಶೆಯ ತಳ್ಪದೊಳು ಪವಡಿಸಿ ಪಾರ್ವತೀವದನ |
ಬಿಸರುಹದಿನಾಧೀಶ ಸರ್ವಸಾಮರ್ಥ್ಯಸಂಪನ್ನನನು ದೇಶಿಕನನು ||
ಒಸೆದಿತ್ತು ಕೇಶವಪ್ರತಿಮೆಯಲ್ಲಾಟ ನಿಂ |
ದೆಸಕದಿಂದಿರ್ಪ್ಪಂತೆ ಮಾಡೆಂದು ಬಿನ್ನೈಸಿ |
ವಸುಧಾಧಿಪತಿಯೊಂದುರಾತ್ರಿಯೊಳು ಜಾನಿಸುತ್ತಿರ್ದ್ದನಾ ಶಿವನಿದಿರೊಳು ||೨೩||

ಕನಸಿನೊಳಗೇಕಾಮ್ರನಾಥನೆಸ್ತಂದು ಚೋ |
ಳನ ಮನದ ಕೊನೆಯಮೇಲೆಡೆವಿಡದೆ ಪಿಣ್ಣಾಕ |
ನೆನಿಪ ಶಿವಸಿದ್ಧ ನೆಮ್ಮಯ ಕುಮಾರಂ ನಿನ್ನ ಪೊಳಲೊಳಗೆ ಮರುಳನಂತೆ ||
ಬಿನದದಿಂದಿರ್ದ್ದಪನವಂ ಬಂದನಾದೊಡೀ |
ವನಜನಾಭಪ್ರತಿಮೆ ಸುಪ್ರತಿಷ್ಠಿತವಪ್ಪು |
ದೆನೆ ಸುಪ್ರಭಾತದೊಳು ಕಣ್ದೆರೆದು ಶಂಕರಂಗೆರಗಿ ನಿಜಗೃಹಕೆಯ್ದಿದಂ ||೨೪||

ಭೂಲೋಲ ನೆಂದಿನಂತೋಲಗಂಗೊಟ್ಟು ಶಶಿ |
ಮೌಳಿ ಕನಸಿನೊಳೊರೆದ ಹದನನಾಪ್ತರೊಳರುಹು |
ತಾಲೋಚನಂಗೆಯ್ದು ಕೇಶವಪ್ರತಿಮೆಯಲ್ಲಾಟ ನಿಲ್ವುದು ತಪ್ಪದು ||
ಮೇಲಿನ್ನಿದಕ್ಕೆ ತಕ್ಕುದ ನೆಣಿಸೆನುತ್ತವ |
ರ್ಪೇಳೆ ದೂತರನಟ್ಟಿದಂ ಪಟ್ಟಣದೊಳು ಸ |
ಲ್ಲೀಲೆಯಿಂದಿರ್ದ್ದಪಂ ಪಿಣ್ಣಾಕದೇವ ನಾತನ ಕರೆದುತರ್ಪುದೆಂದು ||೨೫||

ಅವರು ಚೋಳನ ಬೆಸನೊಳೆಯ್ತಂದು ಪಟ್ಟಣದೊ |
ಳವರಿವರ ಗೃಹವೆನ್ನದರಿಸಿ ನಡೆತಂಮು ತೈ |
ಲವಣಿಜರ ಕೇರಿಯೊಳು ಪಿಣ್ಣಾಕನೆಂಬನೆಲ್ಲಿರ್ದಪನೆನುತ್ತ ಕೇಳೆ ||
ಬವಣಿಗೆಬರುತ್ತಿರ್ಪ ನೊಂದೆಡೆಯೊಳಿರ್ಪನ |
ಲ್ಲವಿವೇಕಿ ಯರೆವರುಳನ್ಯೆದಾನೆ ಯೆನುತಾಗ |
ವಿವರಿಸಲು ಕಂಡು ಪೊರಗೈತಂದು ಕರೆದರರಸನ ಬಳಿಗೆ ಬರ್ಪುದೆಂದು ||೨೬||

ಅನೊರ್ವಭಿಕ್ಷುಕಂ ನೃಪನ ಸಭೆಗೆಸ್ತರಲ |
ದೇನಿಮಿತ್ತಂ ಬಾರೆನೆನೆ ಪೋಗಿ ದೂತರಂ |
ತ್ಲಾನುಡಿಯ ನವನೀಶನೊಡನೆ ಬಿನ್ನೈಸೆ ಶಂಭುವಿನ ವಾಕ್ಯವನು ಮರೆದು ||
ಮಾನಸದೊಳಾತನಂ ತರ್ಪುದೆಂದಟ್ಟಿದಂ |
ಸೇನಾಧಿಪತಿಗಳಂ ದಂಡನಾಯಕರಂಭ |
ಟಾನೀಕಮಂ ಬಂದು ತೈಲಿಕರ ಕೇರಿಯೊಳು ಸಂದಣಿಸಿತಖಿಳಸೈನ್ಯಂ ||೨೭||

ವಿನಯೋಕ್ತಿಗಳನಾಡಿ ಕರೆದೊಡಂ ಬಾರದಿರ |
ಲನಿಬರೊಳ್ದುಷ್ಟರಾಗಿರ್ದ್ದ ಪಟುಭಟರು ಕಂ |
ಡ್ಡನ್ನೆ ಕನಲಿ ತೊಡೆನಡುಕೊರಲ್ಶಿರಮುರಂಚರಣ ವೀತಿನಿತ ಪಿಡಿದುಕೊಂಡು ||

ಬಿನದದಿಂ ಪೊತ್ತುಕೊಂಡೈತರುತ್ತಿರೆ ನಗುತೆ |
ಘನಮಹಿಮಸಿದ್ಧನಾಕಾಶಕ್ಕೆ ನೆಗೆದು ಭೋಂ |
ಕನೆ ಕೊಡಹಲವರು ಬೀಳ್ದರು ಗಾಳಿ ಪೊಯ್ಯೆ ಮರನಿಂದುದಿರ್ದ ಪಣ್ಗಳಂತೆ ||೨೮||

ಮೇಲೆಮೇಲಂಬುಧಿಯ ತೆರೆಯಂತೆ ಮಸಗಿ ಬಿ |
ಲ್ಲಾಳುಗಳು ಪಿಡಿದಪೆವೆನುತ್ತೆ ಬರಲೊಡನವರ |
ನೇಳಿಲಂಗೆಯ್ದು ಸಿದ್ಧೇಶ್ವರಂ ದರಹಸಿತಮುಖನಾಗಿ ನಸುನೋಡಲು ||
ಕಾಲುಗೆಟ್ಟಿವೆವೊಯ್ಯೆ ದೆದೆಗುಂದಿ ಮರವಟ್ಟು |
ನಾಲಗೆ ಮಿಡುಂಕದಾಭಟರಿರ್ದ್ದ ರೀಹದನ |
ಚೋಳರಾಯಂಗೆ ಬಿನ್ನೈಸಿದರು ಚರರು ಸಭೆ ಬೆಕ್ಕಸಂಬೆರಗಾಗಲು ||೨೯||

ಕೇಳಿ ನಡನಡುಗಿ ನೃಪನಳುಕಿ ಹರಿವಿಷ್ಟರದ |
ಮೇಲಿಂದಲಿಳೆಗೆ ದುಮ್ಮಿಕ್ಕಿ ವಂದಿಸಿ ಪಜ್ಜೆ |
ಯೇಳಕೋರೊರ್ಮೆ ಪುಷ್ಪಾಂಜಲಿಯ ಮಾಡುತ್ತೆ ಭಯಭರಿತ ಭಕ್ತಿಯಿಂದೆ ||
ನೀಲಲೋಹಿತರೂಪ ನಿಶ್ಚಲ ನಿರಾಮಯ ನಿ |
ರಾಲಂಬ ಕ್ಷಮಿಸಬೇಕೆಂದು ನವರತ್ನಮಯ |
ಮೌಲಿಯಂ ಸಾರ್ಚಿದಂ ರೇವಣಪ್ರಭುವಿನಡಿಯೊಳು ದೈನ್ಯವೃತ್ತಿಯಿಂದೆ ||೩೦||

ಏಳೇಳು ಚೋಳ ಶಿವನೆಮ್ಮ ದೂರಿದನೆ ಲ |
ಕ್ಷ್ಮೀಲೋಲನಲ್ಲಾಟಮಂ ಬಿಡಿಸಿ ನುಡಿಪೆನೆಂ |
ದಾಲಲಿತ ಶಿವಸಿದ್ಧಕುಲಚಕ್ರವರ್ತಿ ಮುನ್ನಿನ ತನ್ನರೂಪುದಳೆದು ||
ಭಾಳಾಕ್ಷಿ ಭಸ್ಮಾಂಗ ಪಿಡಿದ ಲಾಕುಳ ವಕ್ಷ |
ಮಾಲೆ ಮಿಸುನಿಯಕಂಥೆ ವಜ್ರಕುಂಡಲ ಜಟಾ |
ಜಾಲ ವೆಸಕಂಬಡೆಯೆ ನಡೆತಂದನಚ್ಯುತನಿವಾಸಕಾನಂದದಿಂದೆ ||೩೧||

ಬಂದಿಂತು ತೆರೆಯ ಪಿಡಿಯಿಸಿ ನೃಪನನೊರ್ವನಂ |
ತಂದುಕೊಂಡೊಳಗಣ್ಗೆ ಸಿದ್ಧರಾದಿತ್ಯ ನರ |
ವಿಂದನಾಥಪ್ರತಿಮೆಯುತ್ತಮಾಂಗದೊಳು ಪಿಡಿದೊತ್ತಿದೊಡೆ ನಿಜವೀರ್ಯಮಂ ||
ಅಂದು ಬಾಯ್ದೆರೆದು ನುಡಿದರಸನಭಿಮತಫಲವ |
ನೊಂದಿಸೆ ವಿಚಿತ್ರವೆನೆ ಧಾತ್ರಿಯಬ್ಲಾಟಮುಂ |
ನಿಂದುದಾವಿಷ್ಣುವಿನ ವಿಗ್ರಹಂ ಗಗನದಿಂ ಸುರಕಲ್ಪಮಳೆಗರೆಯಲು ||೩೨||

ಅರುಳಾಳೆ ಪೆರುಮಾಳೆಯೆಂಬ ಪೆಸರಿತ್ತು ಮುರ |
ಹರಗೆ ವಿಜಯೇಂದ್ರಚೋಳಂ ಪೊಜಿಸಲ್ಕಧಿಕ |
ತರಹರ್ಷದಿಂದೆ ಕೈಕೊಂಡುತ್ತರಾಭಿಮುಖನಾಗಿ ಮುದದಿಂದೆ ನಡೆದು ||
ಸುರಪಥದೊಳಖಿಳದೇಶಂಗಳಂ ಕಳೆದುಬಂ |
ದುರುವೈಭವಂದಳೆದು ಸೊಂಪಡರ್ದು ಕೀರ್ತಿಯಂ |
ಪರಕಲಿಸುತಿಹ ಮಾಸನೂರ ಕಂಡಲ್ಲಿಗೆಳ್ತಂದನಾ ಸಿದ್ಧೇಶನು ||೩೩||

ಆವೇಳೆಯೊಳು ಸೂರ್ಯಬಿಂಬವಿಳಿದುದು ಪಡುವ |
ಲಾವರಿಸಿದುದು ತಮಂ ಸಂಧ್ಯಾನಕಧ್ವನಿ ದಿ |
ಶಾವಳಿಗೆ ಪಸರಿಸಿತು ಬಂದಾಗಳಾ ಪೊಳಲ ಹೊರಗಣ ಶಿವಾಲಯದೊಳು ||
ರೇವಣೇಶ್ವರನಿರಲು ಪೂಜಕಂ ಕಂಡು ಸಂ |
ಭಾವಿಸಿ ಯಿದೇಕಿಲ್ಲಿ ಶಯನಮಂ ಮಾಳ್ಪಿರಿ ಮ |
ಹಾವಿರುದ್ಧಸ್ಥಲವಿದೆಲೆಸಿದ್ಧ ಮತ್ತೊಂದುಠಾಣಕ್ಕೆ ಪೋಗಿಮೆಂದಂ ||೩೪||

ಏಕಿಲ್ಲಿ ಶಯನಮಂ ಮಾಡಲಾಗದು ಪೇಳ್ವು |
ದಾಕಾರಣಮನೆಂದು ತಾನರಿಯದವನಂತೆ |
ಲೋಕೈಕಪರಿವಂದ್ಯ ರೇವಣಾಸಿದ್ಧಗುರು ಕೇಳಲೀ ಶಿವಭವನದ ||
ಆಕಡೆಯ ಗೋಪುರದ ಮುಂದೆ ಬಳೆದಿಹ ವಟಾ |
ನೋಕಹದ್ವಯದೊಳಿರ್ದಪು ವಗುರ್ಬಿನ ತಗುಣೆ |
ಯಾಕಾರದ ಸುರಮಿಥುನಂ ಕರ್ಬಿ ಕೊಂದಿಹವು ಪಿಂದೆ ಪಲಬರನೆಂದನು ||೩೫||

ನಮ್ಮನೇಗುವುವವು ಶಿವಾಜ್ಞೆಯುಂಟೆಂದಜ್ಞ |
ಸುಮ್ಮಾನಿ ಸಿದ್ಧೇಶನಿರ್ದನಾ ಶೈವನಿರ |
ಲಮ್ಮದೆ ಪುರಾಂತರಕೆ ಪೋದನಿತ್ತಲು ಕಾಳಗಳ್ತಲೆ ಮಡಲ್ತು ಕವಿದು ||
ಗಮ್ಮನಾಗಸವಿದೆಂದುಂ ಪೃಥ್ವಿಯಿಂತಿದೆಂ |
ದುಂ ಮನಕೆ ಕಾಣಿಸದೆ ಕಜ್ಜಳಕರಂಡಮೆನೆ |
ಬೊಮ್ಮಾಂಡವೊಪ್ಪುತಿರೆ ಯಾಸಮಯದೊಳಗಸುರಮಿಥುನ ವೃಕ್ಷದಿನಿಳಿದುವು||೩೬||

ಮುನ್ನಪಟ್ಟಿರ್ದ ಪಥಿಕರ್ಕಳಂ ಮಡಿಹಿದ ಮ |
ಹೋನ್ನತಿಯ ದರ್ಪದಿಂ ಖಳಮಿಥುನ ಪರಿದುಬ |
ರ್ಪುನ್ನೆಗಂ ನೊಸಲಕಣ್ದೆರೆದುರುಹೆ ಭುವನಪ್ರಸಿದ್ಧನಾಸಿದ್ಧೇಂದ್ರನು ||

ತನ್ನ ಮುಂಬಿನೊಳುಕ್ಕಿನೆರಡುಗುಂಡಾಗಿರಲ |
ವನ್ನೋಡಿ ಕಾರುಣ್ಯದೃಷ್ಟಿಯಿಂದಿನ್ನಿವಂ |
ಮನ್ನಿಸುವೆನೆಂದುದಯಕಾಲದೊಳು ಪಿಡಿದುಕೊಂಡುಯ್ದನಂತಾಪೊಳಲ್ಗೆ ||೩೭||

ಬಂದುಸಿದ್ಧೇಶನಾ ಕಮ್ಮರನ ಕಯ್ಯೊಳವ |
ತಂದು ಕುಡೆ ಸಿಡಿಲಂತೆ ಘುಡುಘುಡಿಸೆ ಘನಭೀತಿ |
ಯಿಂದಮ್ಮೆನೆನಲವಂಗಭಯವಿತ್ತು ಭಯಕಾಳಾಯಸದ ಗುಂಡುಗಳೊಳು ||
ಒಂದುಗುಂಡಂ ಸುರಗಿಯಾಗಿ ಮಾಡಿಸಿ ಸಮಂ |
ತೊಂದುಗುಡಂ ಕಾಸಿದೊಡೆ ಕಡಿದೊಡಂಬಡಿದೊ |
ಡೊಂದಿನಿಸುನಿಮಿರದಿರೆ ದಾಸಣದ ಕುಸುಮಮಂ ತೋರಲದು ವಶವಾದುದು ||೩೮||

ಸ್ವಾಮಿಯೇಂಕಾರಣ ಜಪಾಪುಷ್ಪಮಂ ತೋರ |
ಲೀ ಮಹಾಗುಂಡು ವಶವಾದುದೆಂದೋಜೆಯಿಂ |
ತಾಮಸವಿದೂರನೊಚ್ಚಾಯಿತಂ ಕೇಳಲೊಡನಿವು ಮುನ್ನ ಯಕ್ಷಮಿಥುನಂ ||
ಕಾಮಕೇಳಿಯನೆಸಗುತೂರ್ವ ಮುನಿಯಾಶ್ರಮದ |
ಸೀಮೆಯೊಳಿರಲ್ಕಂಡು ದನುಜದನುಜೆಯರಾಗಿ |
ಭೂಮಿಯೊಳು ಜನಿಸಿಮೆಂದಾ ತಪೋಧನನು ಶಪಿಸಿದನೆಯ್ದೆ ಕುಪಿತನಾಗಿ ||೩೯||

ಎಂದೆಮಗೆ ಮುನಿಪತಿ ವಿಶಾಪವಹುದೆಂದವರು |
ವಂದಿಸಿದೊಡೆಮ್ಮದೆಸೆಯಿಂದಪ್ಪುದೆಂದ ನಂ |
ದಿಂದೆ ತಗುಣೆಗಳಾಗಿ ಪಲಬರಂ ಕೊಂದವೀಪೂರಶಂಕರಸದನದ ||
ಮುಂದಣ ವಟದ್ವಯದೊಳಿದ್ದುರ್ಗುಂಡಾದುವೆ |
ಮ್ಮಿಂದಲೆಂದಾಬಗೆಯ ನರಿಪಿ ನೂತನಪಲಲ |
ವೆಂದು ದಾಸಣದಲರ ಕಂಡು ವಶವಾದುದೀ ಗಂಡುಗುಂಡೆಂದುಸಿರ್ದನು ||೪೦||

ಬಳಿಕ ಸುರಗಿಯ ಮಾಡಿ ಪಿಡಿಯಲೊಡನದು ಸಮು |
ಜ್ಜ್ವಲಿಸಿ ಹಲುಮೊರೆವುತಿರೆ ಕಾರುಕಂ ಕಾಣುತಸ |
ದಳವಿದರ ಮಹಿಮೆಯೆಂದಳುಕಿ ಸಿದ್ಧೇಶ್ವರಂಗಿತ್ತೊಡಂತವನಿಷ್ಟವ ||
ಸಲಿಸಿ ಬೀಳ್ಕೊಂಡು ಸಲ್ಲೀಲೆಯಿಂ ಪೊರಮಟ್ಟು |
ಪೊಳಲನಾಪೂರ ಮುಂದಣ ನದಿಯ ಪೆರ್ಮಡುವಿ |
ನೊಳಗೆ ಮೊನೆಕೆಳಗಾಗಿ ನಿಲಿಸಿ ಚಲಿಸದಿರೆಂದು ನೇಮಿಸಿದನಪ್ರತಿಮನು ||೪೧||

ಮುನಿಗಳಿಗೆ ಕುಲದೈವ ಮನುಗಳಿಗೆ ಮನೆದೈವ |
ವೆನಿಪ ಸಾಮರ್ಥ್ಯಸಂಪನ್ನನಾ ಸಿದ್ಧೇಶ್ವ |
ರನು ಮಾಸನೂರಿಂ ವಿಯತ್ತಳಕೆ ನೆಗೆದು ಬರುತಿರಲು ಮುಂಬಿನೊಳೊಪ್ಪಿತು ||
ಘನತರಪ್ರಾಸಾದ ಮಾರಕಕೂಟಾವಳಿಯ |
ಕನಕಕಳಶದ ಕಾಂತಿಯಿಂ ನಗುತೆ ದಿವಿಜರಾ |
ಜನ ಪುರವ ವಿಕ್ರಮಾರ್ಕನ ರಾಜಧಾನಿಯುಜ್ಜಯಿನಿಯೆಂದೆಂಬ ನಗರಿ ||೪೩||

ಆಪಟ್ಟಣಕ್ಕೆ ನಡೆತರೆ ವಿಕ್ರಮಾದಿತ್ಯ |
ಭೂಪಾಲ ನರಮನೆಗೆ ಕೊಂಡೊಯ್ದು ಪಾವನ |
ಶ್ರೀಪಾದತೀರ್ಥಮಂ ಧರಿಸಿ ಸಿಹ್ಮಾಸನದಮೇಗಿರಿಸಿ ಭಕ್ತಿಗೆಯದ್ದು ||
ಗೋಪತಿಧ್ವಜನ ಪರರೂಪ ನಾನೇಂ ಧನ್ಯ |
ನೋ ಪರಮಪುಣ್ಯವಿಂದೆನಗಾದುದೆಂದು ಬಹು |
ಳೋಪಚಾರವನೊಡರ್ಚಿದನು ಸಿದ್ಧೇಂದ್ರಂಗೆ ದೃಢಚಿತ್ತನಾಗಿ ನಮಿಸಿ ||೪೪||

ಅನರೇಶ್ವರನ ಭಕ್ತಿಗೆ ಮೆಚ್ಚಿ ಜಿತತರುಣ |
ಭಾನುಕೋಟಿಪ್ರಭನು ಸಿದ್ಧಶಿವಯೋಗಿ ಸು |
ಜ್ಞಾನನಿಧಿ ತನಹಸ್ತದ ಕಠಾರಿಯನು ತೋರಿಸಿ ಪೂರ್ವವೃತ್ತಾಂತವಂ ||
ಶಾನರಿಪಿ ಯುಂಬೊಡಮೃತಾನ್ನ ವುಡುವೊಡೆ ಸುವ |
ಸ್ತ್ರಾನೀಕ ವೇರುವೊಡೆ ವಾಹನಂ ಕೂಡುವೊಡೆ |
ಮಾನಿನಿ ಧುರಕ್ಕೆ ನಿಶಿತಾಸ್ತ್ರವಹುದಿಂತಿದೆಂದಿತ್ತ ನತಿಕರುಣದಿಂದೆ ||೪೫||

ಶಿವಸಿದ್ಧನಿತ್ತ ದಿವ್ಯಾಯುಧವ ಕೈಕೊಂಡು |
ಭುವನನುತ ನಾವಿಕ್ರಮಾದಿತ್ಯನೃಪತಿ ಸಂ |
ಸ್ತವನಮಂ ಮಾಡುತಿರೆ ಕೇಳ್ ನೃಪತಿ ಕೆಲವುಕಾಲಾಂತರಕೆ ಬಳಿಕ ನಿನ್ನ ||
ದಿವಿಜಪತಿ ಕರೆಸಿದಪ ನಂದೀಮಹಾಯುಧಕೆ |
ಸವೆದಪುದು ಶಾಪ ಯಕ್ಷಿಣಿಯಪ್ಪಳೆಂದು ಪೇ |
ಳ್ದವಿರಳ ಬ್ರಹ್ಮಸ್ವರೂಪ ಬೀಳ್ಕೊಂಡು ಗಗನವನಡರಿ ನಡೆಗೊಂಡನು ||೪೬||

ಗುರುನಾಥ ನಿಂತು ಬರುತಿರಲಮಮ ಸಿರಿಯ ಸಿಂ |
ಗರಮಾಗಿ ರಂಜಿಸಿತು ನಾಲ್ಕುದಿಕ್ಕಿನೊಳು ಪ |
ನ್ನೆರಡುಯೋಜನದ ವಿಸ್ತೀರ್ಣದಿಂ ಬಳಸಿದ್ದುರ್ಗ ಕಂಗೆಸೆವ ಪೊಂಗೆಲಸದ ||

ಉರುತರ ಪ್ರಾಕಾರದಿಂ ಸಾಲ್ವಿಡಿದ ಪೊನ್ನ |
ಕರುವಾಡದಿಂ ವಿವಿಧ ವಜ್ರಧಾರೆಯ ಕದಹು |
ಪರಿವಡೆದನೇಕ ಬಾಗಿಲ್ವಾಡದಿಂದೆ ಮಂಗಳವಾಡವೆಂಬ ನಗರಿ ||೪೭||

ಕಂಚಿಂ ದೊಡರ್ಚಿದುರುಮುಗಿಲಿಂದೆ ಕಮನೀಯ |
ಕಾಂಚನದ ಕುಸುಮದೋರಣದಿಂದೆ ಮುಕ್ತಾಫ |
ಳಾಂಚಿತ ಕನಕಕಳಶದಿಂ ಕೀಲಿಸಿದ ರಾಣಿವಾಸಗಳ ಹರ್ಮ್ಯದಿಂದೆ ||
ಅಂಚೆ ಯರಗಿಳಿ ಸೋಗೆ ನವಿಲು ಪಾರಾವತಂ |
ಪಾಂಚಾಲಿಕಾಪ್ರತತಿ ನೆಲೆವಡೆದ ಘನಸೌಧ |
ಸಂಚಯದಿ ನೊಪ್ಪುತಿರ್ದ್ದುದು ವೀರಬಿಜ್ಜಳ ಮಹೀಪತಿಯ ಮೆರೆವರಮನೆ ||೪೭||

ಪೊಳೆವ ಶಶಿಸೂರ್ಯವೀಥಿಗಳು ಸೂರಿಪ್ಪತ್ತು |
ನಿಳಯ ವಿನಿತೆಂದೊರೆವರಾರು ಮನ್ನೆಯರ ಮಂ |
ಡಳಿಕರುನ್ನತಸೌಧ ಶತಲಕ್ಷ ರಾಯರಾವುತರಧಿಕಸಾವಂತರ ||
ಸಲುಗೆವಾಳರ ಗೃಹವಸಂಖ್ಯಾತವೆಸೆಯೆ ಕಂ |
ಗೊಳಿಸಿಹುದು ನಿತ್ಯಮಂಗಳದ ನೆಲೆವಾಡ ಮಂ |
ಗಳವಾಡ ಭಾಗ್ಯಲಕ್ಷ್ಮಿಯನೀಡ ವಿಂತಿದಕೆ ತೋಡವನಿಯೊಳಗಿಲ್ಲೆನೆ ||೪೮||

ಸದಮಳ ಸುವರ್ಣಮಯವೆನಿಪ ಶಿವಲಿಂಗ ಲ |
ಕ್ಷದಮೇಲೆ ತೊಂಭತ್ತಆರುಸಾವಿರ ಬಳಿ |
ಕ್ಕದಕೆಲ್ಲ ಮುಖ್ಯಮಾಗಿರ್ದ್ದ ತ್ರಿಪುರಾಂತಕ ಮಹಾಲಿಂಗನಿಹ ದೇಗುಲಂ ||
ಅದರ ಸುತ್ತಾಲಯದಿ ಕಮಲಕ್ಕೆರವರಾಜಿ |
ಪುದಿದ ಸರಸಿಗಳು ಮುನ್ನೂರಮೇಲರುವತ್ತು |
ವಿದಿತವಿಂತೊಪ್ಪುತಿರೆ ಬಗೆಗೊಳಿಸುತಲ್ಲಿಗೆಲ್ತಂದ ನಾಸಿದ್ಧೇಶನು ||೪೯||

ಶಿವಭವನ ನಿವಹಮಂ ಕಂಡಲ್ಲಿ ಮಾಳ್ಪ ವೈ |
ಭವಕೆ ಪರಿಣಾಮಿಸುತೆ ತನ್ನಮಳತೇಜಮಂ |
ಗವಸಣಿಸಿ ಮುಗಿಲಮರೆಯೊಳೆ ನೇಸರಂತೆ ಮಾಸಿಡ ಪರುಸವೇದಿಯಂತೆ ||
ಶಿವಶರಣರರಿದು ಕೀರ್ತಿಸೆ ಲೌಕಿಕರ ನಿಕರ |
ವಿವನಿದೆಲ್ಲಿಯ ಮರುಳನೆನೆ ಪೊಳಲೊಳೈದಿದನು |
ಶಿದತತ್ತ್ವಕೋವಿದನು ರೇವಣಾಸಿದ್ಧಗುರುಮೂರ್ತಿ ಘನಪುಣ್ಯಕೀರ್ತಿ ||೫೦||

ಅರುವೆಗೌಪಿನ ಮೆಯ್ಯ ಮಣ್ಣಕಿಣ ಪೊದಳ್ದ ಕಿರಿ |
ಕಿರಿದಾಗಿ ಪಂದ ಶತಜೀರ್ಣಕಂಥೆಯ ಪೊದೆದು |
ಕರಿಗೊಂಡ ಪೈಶಾಚಿಕಾಕೃತಿಯ ಮೊಳೆನಗೆಯ ಮುಖವ ಮುಸುಕಿದ ಜಡೆಗಳ ||
ಹೊರವೇಷವಿಂತು ರಾರಾಜಿಸಲು ಮೂಲೋಕ |
ದೆರೆಯ ನನುಪಮ ವೀರಶೈವಸಿದ್ಧಾಂತಮಂ |
ಕುರುಹನಿಟ್ಟಿಂತಿದೆಂದರಿವುವ ಮಹಾತ್ಮನೆಲ್ತಂದನಾ ಪಟ್ಟಣದೊಳು ||೫೧||

ನವನಿಧಿಗೆ ಸುರಮಣಿಗೆ ಸುರಕುಜಕೆ ಕಾಮಧೇ |
ನುವಿಗಾಣ್ಮನಾದ ಶಂಕರನ ಬಸುರಿಂದೊಗೆದ- |
ಶಿವಸಿದ್ಧನೆಂಬುದಂ ತನ್ನ ನಿಲವರಿವರಿಲ್ಲೆಂದು ಬೇಡದೆ ಸುಮ್ಮನೆ ||
ಭವನಭವನದ ಮುಂದೆ ನಿಲುತೆ ಕುಳ್ಳಿರುತೆ ಒಳ |
ಲ್ದವನಂತೆ ಬರುತಮಿರೆ ಕಾಣುತಯ್ಯೋಭ್ರಾಂತ |
ನಿವನ ಪಸಿವಂ ಕಳೆವೆನೆನುತೆ ಗಾಣದ ಕಲ್ಲಿಸೆಟ್ಟಿ ವಿನಯದೆ ಕರೆದನು ||೫೨||

ಏಕೆಕರೆದಪೆ ನಿನಗದೇನುಜ್ಜುಗವ ಮೂಢ |
ಬೇಕಗಂ ಪೇಳ್ದೊಡಾಂಬರ್ಪೆನೆನೆ ನಸುನಗುತ |
ಲಾಕರುಣಿ ಗಾಣಮಂ ಪೊಡೆವುದೇ ಸಮಗುಳ್ಳಕಜ್ಜ ವಿಂತಿದನುಮಾಡಿ ||
ಶ್ರೀಕಂಠನಿತ್ತಂಬಕಳವುಂಟು ಸಲಿಸಿ-ನಿ |
ವಾರ್ಯಕುಳದಿನಿಹುದೆನಲೊಡಂಬಟ್ಟು ನಿಂದನು ದಿ |
ವಾಕರಾನಲನೇತ್ರ ನತಿಶಯಪವಿತ್ರನು ವಿಚಿತ್ರನು ಸುಚಾರಿತ್ರನು ||೫೩||

ಭುವನವೀರೇಳರ್ಖಿಳಭವದ ಬಳಿವಿಡಿದು ತಿರು |
ಗುವ ತೆರನಿದೆಂದರಿವುವಂತೆತ್ತುಗಳ ಹೊಡೆದು |
ತವೆ ತಿರುಗಿಸುತ್ತೆ ಗಾಣವನಾಡಿ ಹಿಂಡಿಯಂ ಕಳೆದುಕೊಂಡಾರೋಗಿಸಿ ||
ಶಿವಸಿದ್ಧಶೇಖರಂ ಕತಿಪಯದಿವಸ ಮಿರು |
ತ್ತವನ ದಾರಿದ್ರ್ಯಮಂ ಕಂಡು ಕರುಣದಿ ನೋಡೆ |
ತವಿಲಾಯ್ತು ಬಡತನಂ ಧನಕನಕ ವಸ್ತುವಾಹನವವಂಗುಂಟಾದುದು ||೫೪||

ಸಿರಿವಂತನಾದ ನಾತೈಲವಣಿಜಿಗ ತನ್ನ |
ತರುಣಿಯೊಡವೆರಸು ಪವಡಿಸುತಿರ್ದು ರಾತ್ರಿಯೊಳು |
ಪಂದುದೆಮ್ಮಯಬಡತನಂ ನಮ್ಮ ಕೊಟ್ಟಗೆಯೊಳಿರ್ಪ ಹಿಂಡಿಯಮರುಳನ ||

ಬರವು ಸಮನಿಸಿದಂದುಮೊದಲಾಗ್ಯಿಯೆನುತುಸಿರು |
ತಿರಲು ತನಗೊಂದು ಕಣ್ಣಿಲ್ಲ ಮುನ್ನದು ಕಾಣ |
ಬರುತಿರೆ ಮಹಾಶ್ಚರ್ಯಚೇತಸ್ಕನಾಗಿ ಪೆಂಡತಿಯ ಮೊಗಮಂ ನೋಡಿದಂ ||೫೫||

ಅವಳಿಗಂ ಮುನ್ನಿಲ್ಲದೊಂದುಕಣ್ಣುಂಟಾಗಿ |
ಶಿವಮಹಾದೇವೆಂದು ಚೋದ್ಯಂಬಡುತ್ತಲಿ |
ನ್ನೆವಗೆ ಸರಿಯಾರೆಂದು ಕಟ್ಟಿದೆತ್ತಂ ನೋಡೆ ಮುನ್ನಿಲ್ಲದೊಂದುಕಣ್ಣು ||
ಸವನಿಸಲು ದಂಪತಿಗಳೆಯ್ತಂದು ಕೊಟ್ಟಗೆಯ |
ಲವತರಿಸ ಲುಮ್ಮಹಂ ನಿಜಪಾದಪದ್ಮಮಂ |
ದಿವಿಜಕಾಂತೆಯರೊತ್ತುತಿರಲೆಸೆವ ರೇವಣಾಸಿದ್ಧೇಶನಂ ಕಂಡರು ||೫೬||

ತನ್ನ ಪದತಳಮನೊತ್ತುವ ದಿವಿಜಕಾಂತೆಯರ |
ರನ್ನವೆಳಗಿನ ಬೆಳಗಿನೊಳಗೆ ಸಾಕ್ಷಾದ್ಬ್ರಹ್ಮ |
ವಿನ್ನಾವುದೀಮೂರ್ತಿಯಲ್ಲದೆಂಬಂತೆ ಮುಕ್ಕಣ್ಣು ತಳತಳಿಸುತಿರಲು ||
ಉನ್ನತ ಜಟಾಜೂಟ ಭಸ್ಮಾಂಗ ವಜ್ರಾಜಿಂ |
ಬೊನ್ನ ಪೊಸಕಂತೆ ಪವಿಕುಂಡಲಂ ರಾಜಿಪ ಮ |
ರುನ್ನದಿಯ ಮಸ್ತಕದೊಳಾಂತನ ಕುಮಾರನಿರಲವರು ವಂದನೆಗೆಯ್ದರು ||೫೭||

ನೀವಿನಿತುದಿನವೆಮ್ಮ ಮುಂದಿಟ್ಟುಕೊಂಡಿರ್ದ್ದ |
ರಾವದುರಿತಂ ನಿಮ್ಮ ಪೊರ್ದ್ದದರ್ಚಿಸಿ ಮಹಾ |
ದೇವನನೆನುತ್ತೆ ದಂಪತಿಗಳ್ಗೆ ರಸರಸಾಯನದ ತವನಿಧಿಯನಿತ್ತು ||
ಸೇವೆಗೆಯ್ವಮರಸತಿಯರ ಕಳುಹಿ ರವಿಕಿರಣ |
ಪಾವರಿಸ ಲರಿದರಿವರಿಲ್ಲಿರಲ್ಬಾರದೆಂ |
ದಾವಿಶ್ರುತಂ ಶ್ರುತಿನುತಂ ಪೊಳಲ ರಾಜವೀಧಿಯೊಳು ನಡೆತರುತಿರ್ದ್ದನು ||೫೮||

ಧನದೊಳತಿಬಡವೆ ಯೌವನ ರೂಪಲಾವಣ್ಯ |
ವಿನಯದೊಳು ಸಂಪನ್ನೆ ಸತ್ಕುಲೋತ್ಪನ್ನೆ ಯೆಂ |
ದೆನಿಪ ಬೆಲೆವೆಣ್ಮಾಯಿದೇವಿ ಕಂಡೆಲೆಯಯ್ಯ ರಬ್ಬಳಿಗೆಗೊಂಡಿರ್ಪ್ಪುದು ||
ದಿನಕಿರ್ಮೆ ಕಂಬಿಯಗ್ಗವಣಿಯಂ ತಂದೆಮ್ಮ |
ಮನೆಯೊಳಿರ್ದ್ದೆನಲೊಡಂಬಟ್ಟು ನಲವಿಂದೆ ಕೆಲ |
ದಿನವಿರ್ದ್ದನಲ್ಲಿ ಪೂರ್ವಾಚಾರ್ಯ ನಸಮಗಾಂಭೀರ್ಯನಧಿಕೌದಾರ್ಯನು ||೫೯||

ಪರಮಶೈವಾಗಮಾರ್ಣವ ಪೂರ್ಣಚಂದ್ರಮನು |
ನಿರುಪಾಧಿಕಜ್ಯೋತಿರಾಕಾರ ಯೋಗಿಶೇ |
ಖರನು ಬಾಲೇಶ್ವರನು ಬೆಸಸಲಾಂ ಪೇಳ್ದ ಸಿದ್ಧೇಶ್ವರಪುರಾಣದೊಳಗೆ ||
ಗುರು ಕಂಚಿಮಾಸನೂರುಜ್ಜಯಿನಿಗಳೊಳು ಸಂ |
ಚರಿಸಿ ಮಂಗಳವಾಡದೊಳು ಪೊಕ್ಕು ತೈಲಿಕನ |
ಪೊರೆದು ಮಾಯ್ದೇವಿಯ ನಿವಾಸದೊಳು ನೆಲಸಿರ್ದ್ದಕಥೆಯಿದಯ್ದನೆಯಸಂಧಿ ||೬

ಕುವಲಯದ ತಳೆದುದೇ ಬಿಲ್ಲು ತಾಮರಸಮು |
ದ್ಭವಿಸಿದೆಡೆ ಸರಲು ತಾಮರಸದಿಂ ಸಂಭವಿಸಿ |
ದವನೆ ಸಾರಥಿ ಸಾಸಥಿಯ ಮುಖದೊಳುಣ್ಮಿದುವೆ ರಥಕೆಹೂಡಿದ ತುರಂಗಂ ||
ಅವರ ನುಡಿಯಾಧಾರದಿಂದಿಹುದೆ ತೇರಾಗೆ |
ಬವರಕ್ಕೆ ನಡೆದು ಮುಪ್ಪೊಳಲರೆಯರಂ ಗೆಲ್ದ |
ಶಿವನು ಕರುಣಾರಸಾರ್ಣವನು ಸಲಹುಗೆ ಶಾಂತಮಲ್ಲಿಕಾರ್ಜುನನೆಮ್ಮನು ||೬

## ಅಯ್ದನೆಯ ಸಂಧಿ ಮುಗಿದುದು.

---

ಓಂ ಮಹೇಶ್ವರಾಯನಮಃ.

## ಆರನೆಯ ಸಂಧಿಯು.

---

ಸೂ || ಶಿವಲಿಂಗಕೋಟಿತ್ರಯವ ನಿಲಿಸಿ ಲಂಕೆಯೊಳು |
ಶಿವಸಿದ್ಧವಲ್ಲಭಂ ವೀರಬಿಜ್ಜಳನ ಗ |
ರ್ವವತವಿಸಿ ಗೋರಕ್ಷನದಟನುಪಶಮಿಸಿ ಶಿವಧರ್ಮವನು ವಿಸ್ತರಿಸಿದಂ ||

ವಾಗ್ಭಾಮೆಯರಸನ ಮುಕುಂದನ ಕಿರೀಟಮಣಿ |
ರುಗ್ಭರಸಮಾಕಲಿತ ಪಾದಾರವಿಂದ ಹರಿ |
ಭುಗ್ಭೂಷ ದೋಷಪ್ರಣಾಶ ನಿಶ್ಚಲಯೋಗಿಸಂಕುಲದ ಸುಜ್ಞಾನದ ||
ದೃಗ್ಭಾವನಾಸುಲಭ ಗಿರೀಶ ಪಶುಪತಿ ಪೂರ್ವ |
ದಿಗ್ಭದ್ರಗಜಚಂದನೇಂದು ದುಗ್ಧಾಬ್ಧಿಸ |
ಮೃಗ್ಭಾಸಮಾನದಿವ್ಯಾಂಗ ಜಯಜಯ ಶಾಂತಮಲ್ಲೇಶ ಚಿತ್ಪ್ರಕಾಶ ||೧

ಮುನ್ನದನು ಜಾಧಿಪತಿ ರಾವಣನು ರಾಮನಂ |
ಬಿನ್ನೊಂದು ವಶವಳಿವುತಿರ್ಪ್ಪ ಪದದೊಳು ಹೊರೆಗೆ |
ತನ್ನನುಜನಂ ಕರೆದು ನವಕೋಟಿಲಿಂಗಪ್ರತಿಷ್ಠೆಗೆಯ್ದಪೆ ನೆಂಬುದು ||
ಎನ್ನ ಸಂಕಲ್ಪವೀಪೊಳಲೊಳರುಕೋಟಿಲಿಂ |
ಗಂ ನಿಂದುದದಕೆ ಶಿವಲಿಂಗಕೋಟಿತ್ರಯವ |
ನೀಂ ನಿಲಿಸವೇಳ್ಪುದಿನಿತಂ ಮಾಳ್ಪುದೆಂದು ಗಲ್ಲವ ಹಿಡಿದುಬೇಡಿಕೊಂಡಂ ||೨||

ಅಸುಗಳೆವ ರಾವಣನ ನುಡಿಗೇಳ್ದು ತಾಂ ಪಚ್ಚ |
ಪಸಿಯ ವೈಷ್ಣವನಾದಕಾರಣ ವಿಭೀಷಣನು |
ಪೊಸತಾಗಿ ನವಕೋಟಿ ನಾರಾಯಣ ಪ್ರತಿಮೆಯಂ ಪ್ರತಿಷ್ಠೆಯಮಾಳ್ಪೆನು ||
ಶಶಿಶೇಖರ ಪ್ರತಿಷ್ಠೆಯ ಮಾಳ್ಪುದಂತಿರಲಿ |
ವಶವಲ್ಲೆನಲು ಕೇಳು ಮೂಢ ಮತ್ಸ್ಯಾಕೃತಿಯೊ |
ಳೊಸೆದು ನಾರಾಯಣಂ ಪೂಜಿಸಿದ ಮತ್ಸ್ಯಕೇಶ್ವರಲಿಂಗವಿದೆಯೆಂದನು ||೩||

ಆಮಾತನಾಲಿಸಿ ವಿಭೀಷಣನು ಶಿವಭಕ್ತಿ |
ಯೇ ಮಿಗಿಲಲಾ ಸಕಲಭಕ್ತಿಯಿಂ ಧರ್ಮಾರ್ಥ |
ಕಾಮಮೋಕ್ಷಂಗಳಿದರೊಳಗಲ್ಲದಿಲ್ಲೆಂದು ತರಿಸಂದು ಚಿತ್ತದೊಳಗೆ ||
ತಾಮಸವ ಮಾಡೆ ನಿದಕೆಂದುः ನಂಬುಗೆಗುಡೆ ಪಿ |
ತಾಮಹನ ಮಮ್ಮಗನ ಪೆರ್ಮಗಂ ಕೈವಲ್ಯ |
ಕಾಮಿನಿಗೆ ಕಾಂತನಾದನು ಶಿವಜ್ಞಾನ ಪರಮಾನಂದಯುಕ್ತನಾಗಿ ||೪||

ದಶಮುಖಂ ನಿರ್ಯಾಣಪದವನೆಯ್ದಿದ ಬಳಿ |
ಕ್ಕಸುರೇಶ್ವರನು ವಿಭೀಷಣನು ಲಂಕಾಧಿಪ |
ತ್ಯ೯ಸಮಸ್ತವೈಭವಕೆ ಕರ್ತನಾಗಿದ್ದು೯ ತಾನೊಂದೇ ಮುಹೂರ್ತದಲ್ಲಿ ||
ರಿಸಿಗಳಂ ಬರಿಸಿ ಲಿಂಗಪ್ರತಿಷ್ಠೆಗಳ ಮಾ |
ಡಿಸುವೆನೆಂದುತ್ಸವದಿ ತನ್ನ ಜನಕಂ ವಿಶ್ವ |
ವಸುವಿನಾಶ್ರಮಕೆ ಬಂದಭಿನಮಿಸಿ ಬೆಸಗೊಂಡೊಡೊಸೆದು ಮತ್ತಿಂತೆಂದನು ||೫||

ಮುರಹರಂ ಮತ್ಸ್ಯರೂಪದೊಳು ಲಂಕೆಯೊಳು ಭಾ |
ಸುರ ಭಕ್ತಿಪೂರ್ವಕಂ ಮತ್ಸ್ಯಕೇಶ್ವರನ ಶ್ರೀ |
ಚರಣಪೂಜನೆಯಿಂದೆ ನಿನ್ನಿಷ್ಟಸಿದ್ಧಿ ಕೈಸಾರ್ದಪುದೆನುತ್ತೆ ಪೇಳೆ ||

ಕರುಣದಿಂದಂ ಪುಲಸ್ತ್ಯಬ್ರಹ್ಮ ಮುದದಿ ನಾ ।
ದರಿಸಿ ಬೀಳ್ಕೊಡೆ ವಿಭೀಷಣನೂರ್ಗೆ ಬಂದು ಶಂ ।
ಕರನ ನಾಮತ್ಸ್ಯಕೇಶ್ವರನ ನರ್ಚಿಸಿ ಕುಶಾಸ್ತರಣದೊಳು ಪಟ್ಟಿರ್ದ್ದನು ॥೪॥

ಕಲಿಯುಗ ಪ್ರಥಮಪಾದದ ಸಮಯದಲ್ಲಿ ಮುಂ ।
ದಿಳೆಯೊಳವತರಿಸಿದಪ ನೆಮ್ಮಕುವರಂ ಪ್ರಮಥ ।
ಕುಲತಿಲಕ ರೇವಣಾಸಿದ್ಧ ನಾತನಿನಪ್ಪುದೀಕಜ್ಜವೆಂದು ಬೆಸಸಿ ॥
ನೆಲವಿನಿಂ ಸ್ವಪ್ನದೊಳು ಪಂಚವದನಂ ಸಮು ।
ಜ್ಜ್ವಲಿಸೆ ಕಣ್ದೆರೆದೆದ್ದು ಪೌಲಸ್ತ್ಯನಧಿಕನಿ ।
ರ್ಮ್ಮಳಚಿತ್ತನಾಗಿ ಸುಖದಿಂದಿರ್ದ್ದ ಶಿವನೊರೆದ ದಿವಸಂ ಬರಲ್ಕೆ ನೆನೆದು ॥೫॥

ಹರನೊರೆದ ಸಮಯ ಸಂಭವಿಸಿತಿದಕೆಂತೆಂದು ।
ಮರಳಿ ಸಾತ್ವಿಕಬುದ್ಧಿಯಿಂ ಬಂದು ಮತ್ಸ್ಯಕೇ ।
ಶ್ವರನ ನರ್ಚಿಸೆ ಕುರುಹ ನರಿಹಿ ಬಡಗಲೊಳಾತ ನಿರ್ದ್ದಪನೆನುತ್ತೆ ಪೇಳಿ ॥
ಹರುಷದಿಂ ಬೀಳ್ಕೊಡಲು ಕಾಮರೂಪಿಂದೆ ದಶ ।
ಶಿರನನುಜ ನಾಮುಹೂರ್ತದೊಳೆ ಪೊರಮಟ್ಟು ನಿಜ ।
ಪುರಮಂ ವಿರೂಪಾಕ್ಷಸಿದ್ಧನೆಂದೆಂಬ ಪೆಸರಿಂದೆ ಧರೆಯೊಳು ಚರಿಸಿದಂ ॥೬॥

* ಚೋಳ ಕೊಂಕಣ ತುಳುವ ಕರ್ನಾಟ ಲಾಟ ನೇ ।
ಪಾಳ ಕಾಶ್ಮೀರಾಂಗ ಬರ್ಬರ ಕಳಿಂಗ ಮಲ ।
ಯಾಳ ಕಂಬೋಜ ಕುಂತಳ ಪಾರಿಯಾತ್ರ ಸಿಂಹಳ ಪಾರಸೀಕ ಮಗಧ ॥
ಗೌಳ ಮುಂತಾದ ದೇಶಂಗಳೊಳ್ ಪೊಕ್ಕು ಸ ।
ಲ್ಲೀಲೆಯಿಂದವರವರ ವೇಷಭಾಷೆಯನು ಸಂ ।
ಮೇಳನದಿನರಸಿದನು ದಾನವೇಶ್ವರನು ಶಿವತತ್ವ ವಿದ್ಯಾಮೂರ್ತಿಯಂ ॥೭॥

ಅನಿತುದೇಶಂಗಳೊಳಗರಸಿ ಕಾಣದೆ ದೇಶಿ ।
ಕನ ನೇವೆನೆಂದಾ ವಿಭೀಷಣನು ಚಿಂತಿಸುತೆ ।
ಮನದೊಳಗೆ ಮುಂದೆ ಬರುತಿರಲಧಿಕತರದ ಬೆಳೆಸಿರಿಯ ಸೊಂಪಿಂದೊಪ್ಪುವ ॥

---

* ಪಾ ॥ ಲಾಳಕೊಂಕಣ ತುಳುವತುರುಕ ಕರ್ನಾಟ ಮಲ । ಯಾಳ ಕಾಶ್ಮೀರಾಂಗ ಬರ್ಬರಕಳಿಂಗನೇ । ಪಾಳಕನ್ನೋಜ ಕುಂತಳಪಾರಿಯಾತ್ರ]

ಘನತರಸುವೃಷ್ಟಿಶೋಭನ ಕರೆವಸುರಭಿಯಿಂ |
ದಿನಿತುಕುಂದದೆ ಚೆಂದವಾಗಿ ಮಂಗಳವಾಡ |
ವೆನಿಪ ಪಟ್ಟಣ ವಿರಾಜಿಸೆ ಕಂಡು ನಿಂದನಾಪೂರಮೊಳಲ ಬನದೆಡೆಯೊಳು ||೧೦||

ಗುರುವಿರ್ಪ್ಪ ಪಟ್ಟಣವಿದಾಗಬೇಕೆಂದು ದಶ |
ಶಿರನನುಜ ನನುಮಾನಿಸುತ್ತಿರಲು ಕ |
ಣ್ಮರಲ ಕೊನೆ ಕೆತ್ತಿತು ಸಮೀಪದೊಳು ದಕ್ಷಿಣವಿಭಾಗದೊಳು ಸುಣ್ಪುದಳೆದು ||
ಸರದೋರಿದುದು ಗೌಳಿ ಹಸುಬನೆಡದೊಳು ನುಡಿದು |
ದಿರದೆ ಕನ್ನಡಿಕಳಸಮಂ ಪಿಡಿದು ಬಂದರೆಳೆ |
ವರೆಯದ ವಿಲಾಸಿನಿಯರಿದಿರಾಗಿ ಬಳಿಕಧಿಕಶುಭಕರವಿದೆಂದು ತಿಳಿದಂ ||೧೧||

ಅಂಬುಜಭವಾಂಡಮಂ ತುಂಬುವ್ರೋವುವಕಿಡಿವು |
ವೆಂಬೀ ಗುಣತ್ರಯಕೆ ತಾನಲ್ಲದಿಲ್ಲೊಡೆಯ |
ರೆಂಬುದಂ ಕಾಣಿಸಲು ಗುಪ್ತವೇಷದಿ ರೇವಣಾಸಿದ್ಧಗುರುನಾಥನು ||
ಕಂಬಿಯಿಂದುದಕಮಂ ಪೊತ್ತುಕೊಂಡೊರ್ವನೆ ವಿ |
ಲಂಬವಿಲ್ಲದೆ ನಡೆತರುತ್ತಿರಲು ನಡೆ ನೋಡಿ |
ಸಾಂಬನುಸಿರಿದ ಚಿಹ್ನ ಕಂಗೊಳಿಸಲಾವಿಭೀಷಣನು ಮುದಮಂ ತಾಳ್ದನು ||೧೨||

ನಿಧನ ನಿರ್ಧನಿಕಂಗೆ ಕೈಸಾರಿದಂತೆ ನಿಜ |
ಹೃದಯದೊಳಗತಿವಿಲಾಸಮನಾಳ್ದು ಬದುಕಿದೆಂ |
ಬದುಕಿದೆನೆನುತ್ತೆ ಬೆಂಬಳಿಯೊಳೆಯ್ದಂದಿರ್ಪ್ಪ ತಾಣಮಂ ಕುರುಹುಗೇಳ್ತು ||
ಮದನಹರಮತ್ಸ್ಯಕೇಶ್ವರನ ನೆನೆಯುತೆ ಸಂತ |
ಸದಿ ಬಯಸಿದಿಷ್ಟಾರ್ಥಸಿದ್ಧಿ ತಾಮಸವಿಲ್ಲ |
ದೊದಗಬೇಕೆಂದು ವಿಟವೇಷಮಂ ಕಯ್ಕೊಂಡನಾ ಪುಣ್ಯಜನತಿಲಕನು ||೧೩||

ಅಣಿಮುತ್ತಿನ ಕಂಠಮಾಲೆಯಂ ಕಟ್ಟಿನು |
ಹ್ಮಾಣಿಕದ ನಿಂಬಳವನಿಟ್ಟೆಸೆವ ಕತ್ತುರಿಯ |
ವೀಣೆ ಬಾವನ್ನ ಕುಂಕುಮವ ನೊಡಗಲಸಿಯನುಲೇಪನಲಲಾಮಂಗಳಂ ||
ಜಾಣಿಂದೊಡಚ್ಚಿ ಮನುಜಾಕೃತಿಯ ನವಪಂಚ |
ಬಾಣನಿವನೆಂಬಂತೆ ದೇವಾಂಗಮಂ ಪೊದೆದು |
ಕೇಣಿಗೊಂಡಂ ಚತುರವಿಟಧರ್ಮವನು ವೀಭೀಷಣನು ವಿನಯಾಭರಣನು ||೧೪||

ಆವೇಳೆಯೊಳು ಪಿಂಬಗಲ ನೇಸರರುಣಕಿರ |
ಣಾವಳಿಯ ನಾಡೆ ಬೀರುತ್ತೆ ಪಶ್ಚಿಮಸಮು |
ದ್ರಾವಗಾಹವನೊಡರಿಚಿತ್ತು ತಡೆಯದೆ ಸರೋವರನಿಕರಮಧ್ಯದಲ್ಲಿ ||
ತಾವರೆಯರಲ್ಗಳಿಸಳಾವರಿಸೆ ಚಕ್ರವ್ವಾ |
ಕಾವಳಿಗಳೊಂದನೊಂದಗಲೆ ನಸುಗತ್ತಲೆ ಮ |
ಹೀವಳಯಮಂ ಪುದಿಯೆ ಸಂಜೆಗೆಂಪಭ್ರಮಂ ಬಣ್ಣವಿಡೆ ಕೆಂಕಮಾಗಿ ||೧೫||

ಗಗನವೆಂದೆಂಬ ಲತೆಪೂತಂತೆತೀವಿ ತಾ |
ರಗೆಮಸಗೆ ತಿಮಿರವಾರ್ಧಿಯೊಳೊಗೆದ ಪವಳವ |
ಳ್ಳಿಗಳಂತೆ ಕೆಂಜೊಡರ್ಗಳೆಸೆಯೆ ತಣ್ಗದಿರ್ವಕ್ಕಿ ಮೊಗವಿಟ್ಟು ನಭವನೋಡೆ ||
ಝುಗಝುಗಿಸುತುದಯಿಸಿತು ಚಂದ್ರಬಿಂಬಂ ಕತ್ತ |
ಲೆಗೆ ಪಲಾಯನವನಾಗಿಸುತೆ ದಿಗ್ಭಿತ್ತಿಯಂ |
ಸೊಗಯಿಪಂತಿರೆ ಧವಳಿಸುತೆ ಬಿರಯಿಗಳ್ಗೆ ಸಂತಾಪಮಂ ಸೈಗರೆವುತೆ ||೧೬||

ಕೋಗಿಲೆಗಳರಸಂಜೆವಿಂಡಿನಂತಿರ ಲಿತರ |
ಸಾಗರಂಪಾಲ್ಗಡಲವೋಲಿರೆ ಮನೋಜ್ಞಕೃ |
ಷ್ಣಾಗರುರಸಂ ಚಂದನಕ್ಷೋದದಂತಿರೆ ಮಹೇಂದ್ರನೀಲೋಪಲತತಿ ||
ಭೋಗಿಸದ ಪೊಚ್ಚಪೊಸಮುತ್ತಿನಂತಿರೆ ಬೆಡಂ |
ಗಾಗಿ ಚಂದ್ರಾತಪಂ ಧಾರಿಣಿಯ ನೆಣ್ದೆಕ್ಕೆ |
ನಾಗಸಮ ನಾವರಿಸಿ ತೀವಿತು ಪಳಚ್ಚನೆ ವಿಕಾಸವೆಯ್ದಲು ನೆಯ್ದಿಲು ||೧೭||

ಅಲರಂಬು ಪಿಡಿದ ಕೂರಲಗಂಬು ಕರ್ವುವಿ |
ಲ್ತುಳಿದ ಪದವಿಲ್ಲುಸುಳಿವ ತಂಬೆಲರು ದೀಹದೆಳ |
ವುಲಿ ಯಂಚೆ ಗಿಳಿ ಜೊನ್ನವಕ್ಕಿ ಮರಿದುಂಬಿ ಕೋಗಿಲೆಗಳೇ ಬಳಿಯಾಳ್ಗಳು
ಇಳೆಯ ವಳಯವೆ ವಿಪಿನ ವಿರಹಿಸಂಕುಲವೆ ಮೃಗ |
ಕುಲವಚ್ಚಬೆಳುದಿಂಗಳೇ ಬೀಸಿಬಿಟ್ಟ ಪೆ |
ರ್ಬಲೆಯಾಗೆ ಮನ್ಮಥಮಹಾವೀರನಾವೇಳೆಯೊಳು ಬೇಂಟೆಗುಜ್ಜುಗಿಸಿದಂ ||೧೮||

ಕಳುಹಿ ತತ್ಸಮಯದೊಳು ಸಖನೊರ್ವನಂ ವಿನಿ |
ರ್ಮಳಮಧುರವಚನವಿಸ್ತಾರದಿನೊಡಂಬಡಿಸಿ |
ಬಳಿಕವಂ ಬಂದರುಹಲೊಡನೆ ಹಡಪಾಳಿಸಹಿತಾನಂದರಸ ಮೊಗದೊಳು ||

ತುಳುಕೆ ಪೊಡಮಟ್ಟನು ವಿಭೀಷಣನು ಬೆಳ್ದಿಂಗ |
ಳೊಳಗೆ ವೇಶ್ಯಾವಾಟದುಪ್ಪರಿಗೆಯೋರಣಂ |
ಗಳನು ನಿಟ್ಟಿಸುತೆ ಮಾಯ್ದೇವಿಯಿಹ ಮನೆಯನರಸುತೆ ಬಳಿಕ ಬೀದಿವಿಡಿದು ||೧೯||

ಇಂದಿರವರಲ ಮಾಟಕೂಟಂಗಳಿಂದೆ ವಿಮ |
ಳೇಂದುಕಾಂತದ ಚೌಕಿಗೆಗಳಿಂದೆ ವಿಲಸದರ |
ವಿಂದರಾಗೋಪಲದ ಮತ್ತವಾರಣದಿಂದೆ ಪಸುರ್ಗಲ್ಲ ಜಗತಿಯಿಂದೆ ||
ಕುಂದಣದ ಭಿತ್ತಿಯಿಂದಖಿಳಕುಲಿಶದ ಕಳಶ |
ದಿಂದೊಪ್ಪಮಂ ಪಡೆದುದಾಸೂಳೆಗೇರಿ ದಿತಿ |
ನಂದನಾನ್ವಯತಿಲಕನಾ ವಿಭೀಷಣನು ಸಲವಿಂದೆ ನೋಡುತೆ ಬಂದನು ||೨೦||

ಪೊಸಹರೆಯ ಕಡುಸೊಬಗು ಮಿಾಟಾದ ರೂಪು ರಾ |
ಜಿಸುವ ಲಾವಣ್ಯ ನೆರೆಜಾಣ್ಮೆ ಸೊಂಪಿನ ರೇಖೆ |
ಯೆಸೆವಹ್ಷಜಾತಿ ನಟನೆಯ ಗಮನ ಮರುಪುಟದ ಸಕ್ಕರೆಗೆ ಸಾಮ್ಯಮಾಗಿ ||
ಮಿಸುಪ ಸವಿನುಡಿ ಪಂಚಬಾಣಂಗಳಂ ಪ್ರಯೋ |
ಗಿಸುವ ಪಲತೆರದ ನೋಟಂ ಪರಿಸ್ಫುರಿಸುತಿಹ |
ಶಶಿಮುಖಿಯರೊತ್ತೆಗೊಳಲೆಂದು ನೆಲೆವನೆಯ ಪಡುಸಾಲೆಯೊಳ್ ನಿಂದಿರ್ದ್ದರು||೨೧||

ನೇವುರದ ಪಾಯವಟ್ಟದ ನೀಳ್ದ ನಿರಿವಿಡಿದ |
ದೇವಾಂಗದೊಳ್ನುಡೆಯ ಕಾಂಚಿ ಕಟಿಸೂತ್ರ ಹೀ |
ರಾವಳಿಯ ಮಿಗೆ ಹೊನ್ನಬಳೆಯ ತೊಳಗುವ ಮೂಕುತಿಯ ಪಸುರ್ವರಲೋಲೆಯ ||
ನೇವಳದ ವೆಂಟಿಯುದ ತೋಳಬಂದಿಯ ಹೊನ್ನ |
ಹೂವಿನ್ನರನ್ನದುಂಗುರದ ಸಿಂಗರದ ನಾ |
ನಾವಿಲಾಸಿನಿಯರೊಪ್ಪುತ್ತಿರ್ದ್ದರಾರಮ್ಯಗಾಣಿಕ್ಯವೀಥಿಯೊಳಗೆ ||೨೨||

ಪಿಡಿದು ಪೊಮ್ಮಣಿಯ ರನ್ನದ ಮಣೆಯಮೇಲೆಡಂ |
ಬಡೆದು ಕುಂಕುಮ ತಿಲಕದೊಳಗೆ ನಸುನೆಮರುಣ್ಮೆ |
ನಿಡಿಯಜಡೆ ನೆಟ್ಟನಿರೆ ಮಿಸುನಿಯೋಲೆಗಳೊಲೆಯೆ ಘಲಿಲು ಘಲಿಲೆನಲಂದುಗೆ ||
ಹೊಡಕರಿಸೆ ಹಾರವೆಡೆವಿಡದೆ ನರ್ತಿಸೆ ಕುರು |
ಳ್ಕಡುನೀರೆಯೊರ್ವಳುಯ್ಯಲನಾಡುತಿರ್ದ್ದಳೊಂ |
ದೆಡೆಯೊಳಿನಿಯನ ಪಾಡುತಖಿಲರಾಗಾಮೃತದ ಕಡಲು ಪೆರ್ಚಿರೆಗಾಣಿಸೆ ||೨೩||

ನೆಲೆಮೊಲೆಯ ಸೋರ್ಮುಡಿಯ ಬಿಣ್ಪಿಂಗೆ ಸಣ್ಣನಡು |
ಬಳುಕೆ ಕೊರ್ಬ್ಬಿದ ಜಘನ ಜಡಿಯಲುಪವೀತವಾ |
ಗೆಳಲಿಟ್ಟ ಬಟ್ಟಮುತ್ತಿನ ನೀಳ್ದ ಸರದ ಮಾಣಿಕದ ಪದಕದ ಬೆಳಗಿನ ||
ಬಳಗ ವೆಣ್ದಸೆಯನಾವರಿಸೆ ನಡೆತರುತೆ ಕಾ |
ದಲನನಿದಿರೊಳ್ಕಂಡು ಹಾರೈಸಿ ಕಯ್ವಿಡಿದು |
ನಿಳಯಕ್ಕೆ ಕೊಂಡೊಯ್ದಳೊರ್ವಳಂಗಜನ ಜಯಲಕ್ಷ್ಮಿಯೆಂಬಂತೊಪ್ಪದಿಂ ||೨೪||

ಮೊಲೆಮುಡಿಗಳಿಂದೆ ಭಿತ್ತಿಯೊಳು ಚಿತ್ರಿಸಿದ ಪು |
ತ್ತಳಿ ಕಣ್ಗೆ ಸೊಗಸಾದೊಡೇನನುಭವಕ್ಕೆ ಬಗೆ |
ಗೊಳಿಪಂತೆ ಸುಖವನೀಯಲ್ಬಲ್ಲುದೇ ಬರಿಯ ಚೆಲುವತನವಿರ್ದೊಡೇನು ||
ಬೆಲೆವೆಣ್ಗೆ ನೋಟದಿಂದೊಲಿಸಿ ಕೂಟದೊಳು ವೆ |
ಗ್ಗಳಿಸಿ ಮೋಹವನುಂಟುಮಾಡಿ ವಿಟರರ್ಥಮಂ |
ಸೆಳೆವ ಚಾತುರ್ಯವಿರಬೇಹುದೆಂದೊರ್ವಳಣುಗಿಗೆ ಪೇಳುತಿರ್ದ್ದಳೊಲಿದು ||೨೫||

ಮೊಸಲಾದಜ್ಜ ಜವ್ವನೆ ಋತುಸ್ನಾತೆ ಷ |
ಣ್ಮಾಸಗರ್ಭಿಣಿ ನೋಡಿ ನೆರೆ ಸೋಲ್ತು ಕಾತರಂ |
ಕೈಸಾರ್ದ ಕಾಮಿನಿ ನವಜ್ವರಂಬಿಡಿದ ವಧು ನಡೆದು ಬಳಲಿದ ಕೋಮಲೆ ||
ಮಾಸಬಾಲವತಿ ನೃತ್ಯವನಾಡಿ ಬಳಲಿದ ವಿ |
ಳಾಸಿನಿ ಕನಲ್ದು ತಿಳಿದಬಲೆ ತಡೆದನುಭವಿಸಿ |
ದಾಸುದತಿ ಯಿನಿಬರೊಲವಿಂಗೆ ನೆಲೆಯೆಂದು ಸಖನೊಡನೊರ್ವವಿಟನುಸಿರ್ದನು ||೨೬||

ಭಾವಕನು ರಸಿಕನು ಕಳಾವಿದನು ರತಿತಂತ್ರ |
ಕೋವಿದನು ವಿನಯವಂತನು ವಿವೇಕಜ್ಞನು ಮ |
ಹಾವಿಚಕ್ಷಣನೆನ್ನನಲ್ಲನೆಂದೆನಲೀವನಲ್ಲಗಡ ಬಲ್ಲೆನವನಂ ||
ಅವಗುಣವಿರ್ದೊಡೇ ನೀವಗುಣವಿಲ್ಲದನೆ |
ಭೂವಳಯದೊಳಗಪ್ರಯೋಜಕನೆನುತ್ತಧಮ |
ಭಾವಮಂಮಾಡಿ ನುಡಿದಳು ಮಿತ್ರೆಯೊಡನೊರ್ವಲೋಲೆ ಕಡುಸಡಗರದೊಳು ||೨೭||

ಕೆಂಡಮಂ ನುಂಗುವ ಚಕೋರಂಗಳೆಂತಾದೊ |
ಡುಂಡು ನಲಿಯಲಿ ಚಂದ್ರಿಕಾರಸವನುಚಿತವದು |
ಪುಂಡರೀಕೋತ್ಕರದ ತಣ್ಪಿಡಿದ ಬೀಜರಾಜಿಂಗೆ ನಿಜಾಹಾರವೆನಿಪ ||

ಪಾಂಡುರಮರಾಳಂಗಳಿಂದುಕಾಂತಸ್ಥಲದ |
ಶಂಡದಿಂ ಚಂದ್ರಕಿರಣದಿನೊಸರ್ದುರ್ಪ ಪರಿದು ಮಡು |
ಗೊಂಡು ಸಲಿಲದೊಳಾಡಿದಪುವು ನೋಡದ್ಭುತವಿದೆಂದಳೊರ್ವಳ್ವಿರಹಿಣಿ ||೨೮||

ವನಿತೆ ನಲ್ಲನ ತೋಳಮೇಲೆ ಪಟ್ಟಿರ್ದ್ದು ಕಾ |
ಮಿನಿಯನೊರ್ವ್ವಳ ನಾತನಾಲಿಂಗಿಪುದನು ತಾಂ |
ಕನಸಿನೊಳು ಕಂಡು ಕಂಗನೆ ಕನಲಿ ಕಂಬನಿಯ ಸೈಗರೆವುತಿರಲು ನೋಡಿ ||
ಅನುರಾಗದಿಂದಲೆಚ್ಚರುದೋರಿ ತಕ್ಕೈಸಿ |
ಮನಸಿಜಕಲಾತಂತ್ರದಿಂ ಪರಮಸುಖವನಿ |
ತ್ತನು ತದ್ವಧೂಟಿಗಾಕಾಂತಂ ನಿತಾಂತಮೋಹನವಲ್ಲಿ ಕುಡಿವರಿಯಲು ||೨೯||

ವನಿತೆಯರ ನುಡಿ ನೋಟ ನಗೆ ತಕ್ಕೆ ಗಾನವಾ |
ನನರಾಗ ಕೈಕಾಲುಸೊಂಕು ಗಂಡೂಷಮಧು |
ತನಿಗಂಪುವಡೆದ ಸುಯ್ ಕರ್ಣಿಕಾರಂ ತಿಲಕ ಪುನ್ನಾಗ ಕುರವಕ ಕುಜಂ ||
ವಿನುತಪ್ರಿಯಾಲ ಚಂಪಕ ಚೂತ ವಸುಗೆ ನೂ |
ತನವಕುಳ ಸಿಂಧುವಾರಂಗಳಂ ಬೇಗದಿಂ |
ಕೊನರಿಸುವುವಂತೆಗಡ ಪೆಣ್ಗೆ ಸೋಲದರಾರೆನುತ್ತಿರ್ದ್ದನೊರ್ವವಿಟನು ||೩೦||

ಇವರ ಕೌಶಲ್ಯ ಸುಗುಷರ ಜನ್ಮಸಾಫಲ್ಯ |
ವಿವರ ಮೊಳೆನಗೆ ಕಾಮುಕರ ಬಗೆಯ ದಗೆ ನೋಳ್ಪೊ |
ಡಿವರ ಮಾತಿನರೀತಿ ಮನ್ಮಥನ ವಿಖ್ಯಾತಿಯಿವರ ನಡೆ ಮೋಹನದೆಡೆ ||
ಇವರ ಪಾಂಗದನೋಟ ವಿಟರಧೀವಶದೋಟ |
ವಿವರಗುರುವಾಯಿ ರತಿದೇವಿಯ ವಿಡಾಯಿ ಯೆಂ |
ದವನಿಯೊಳು ನುತಿವಡೆದ ಬೆಲೆವೆಣ್ಗಳೊಪ್ಪಿದರು ಮನೆಮನೆಯ ಮುಂಗಡೆಯೊಳು||೩೧

ನೋಡುತ್ತ ಸೂಳೆಗೇರಿಯೊಳಿಂತು ಪಲತೆರದ |
ಗಾಡಿಕಾತಿಯರ ಚೆಲ್ವಂ ವಿಭೀಷಣನು ಶಶಿ |
ಚೂಡನಪರಾವತಾರನ ರೇವಣಾಸಿದ್ಧಗುರುವಿನ ಮಹಾಮೂರ್ತಿಯಂ ||
ನೋಡಬೇಕೆಂಬ ಲವಲವಿಕೆಯಿಂ ಸಂತಸಂ |
ಮೂಡುತಿರೆ ದಿವ್ಯಗಂಧಾನಿಲಂ ಮೇಲ್ವಾಯ್ದು |
ತೀಡುತಿರೆ ಬಂದು ಪೊಕ್ಕನು ಮಾಯಿದೇವಿಯಿಹನೆಲೆವನೆಯ ಮುಂಗಡೆಯೊಳು ||೩೨||

ಇವಳಿನ್ನದೆಂತಪ್ಪ ಪುಣ್ಯವತಿಯೋ ಸದಾ |
ಶಿವ ತಾನೆ ಬಲ್ಲನಿಂತೀತಾಣದೊಳು ಸಿದ್ಧ |
ಶಿವಯೋಗಿರಾಯ ನೆಲಸಿರ್ದ್ದಪನೆನುತ್ತೆ ಕೀರ್ತಿಸುತೆ ಬರುತಿರಲು ಕಂಡು ||
ಯುವತಿ ಮಾಯಾದೇವಿ ಯಿದಿರ್ವಂದು ಸಖಿಯಿಂ ಪ |
ದವನು ತೊಳೆಯಿಸಿ ಮೃದುಳತಲ್ಪದೊಳಗಿರಿಸಿ ದಾ |
ನವಕುಲಶಿಖಾಮಣಿಯನುಪಚರಿಸಿದಳು ವಿನಯದಿಂ ಕಿವಿಗೆ ಸವಿಯನಿತ್ತು ||೩೩||

ಹೊಸಬಗೆಯ ಪಟ್ಟವಸನಾಭರಣದಿವ್ಯರ |
ತ್ನಸಮೂಹಮಂ ತೊಟ್ಟು ಮಾಯ್ದೇವಿಯುರ ನನುಸ |
ರಿಸಿ ವಿಭೀಷಣನಲ್ಲಿ ಹೊಸರನಸಂಭೋಗಕೇಳಿಯಂ ರಚಿಸಿ ಬಳಿಕ ||
ಒಸೆದರ್ಧರಾತ್ರಿಯೊಳಗೆದ್ದು ಗುರುವಿನ ಚರಣ |
ಬಿಸಜಮಂ ಭಜಿಸುವೊಡೆ ಶುಚಿಯಾಗಿ ಬಂದು ನಿ |
ಟ್ಟಿಸಿದನಾಗೃಹದ ಚೌಕಿಗೆಯ ಮುಂದಿರ್ದ್ದ ವಾತಾಯದೊಳಿಕ್ಕಟಿಯೊಳು ||೩೪||

ಸರಸತಿ ಮಹಾಲಕ್ಷ್ಮಿಯಿಂದ್ರಾಣಿಯರು ಚರಣ |
ಕರತಳಂಗಳನೊತ್ತುತಿರಲು ತಳತಳಿಸುತಿರೆ |
ನಿರುಪಾಧಿಕಜ್ಯೋತಿ ಬಿಸಿಲ ಬೆಳ್ದಿಂಗಳ ಪರಾಭವಿಸುತಂಗದಲ್ಲಿ ||
ಕರಮೊಪ್ಪುತಿಹ ರೇವಣಾರಾಧ್ಯರಿಗೆ ನಮ |
ಸ್ಕರಿಸಿ ಕಿಂಕುರ್ವಾಣಮಂ ನುಡಿದು ಭಯಭಕ್ತಿ |
ಯೆರಕದಿಂ ಪೌಲಸ್ತ್ಯನಂದು ಕಯ್ಗಳ ಮುಗಿದು ನಿಂದಿರ್ದ್ದ ನೋಜೆಯಿಂದೆ ||೩೫||

ನಿನ್ನ ಭೀಷಣರೂಪನುಳಿದೆಲೆವಿಭೀಷಣ ಜ
ಗನ್ನುತನರಾಕೃತಿಯೊಳೆಯ್ತಂದೆ ಪೇಳೆಂತಿ |
ದೇನ್ನಿಮಿತ್ತವೆನುತ್ತೆ ತಾನರಿಯದವನಂತೆ ನಸುನಗುತೆ ಕೇಳಲೊಡನೆ ||
ಬಿನ್ನಪಂ ಘನಪರಂಜ್ಯೋತಿರಾಕಾರನೇ |
ಮನ್ನಾಥನೇ ರೇವಣಾಚಾರ್ಯನೇ ಎನು |
ತ್ತನ್ನುಡಿದನಾದ್ಯಂತವಾಗಿ ತಾಂಬಂದ ವೃತ್ತಾಂತಮಂ ದನುಜೇಂದ್ರನು ||೩೬||

ಗುರುನಾಥನುಂ ವಿಭೀಷಣನು ಮಿಂತಿರ್ವರುಂ |
ಪರಿಭಾಷಣಂಗೆಯ್ವ ಸಮಯದೊಳು ಕಂಗೊಳಿಸಿ |
ತರುಣೋದಯಂ ಪೂರ್ವಗಿರಿಶಿಖರದೊಳು ಪರಿಸ್ಫುರಿಸಿತಾದಿತ್ಯಬಿಂಬಂ ||

ಸಂಸಿರುಹವಲಿರ್ದು ವೊಡಗೂಡಿದುವು ಪೊಣರ್ವಕ್ಕಿ |
ವೊರೆದುವಾನಕ ಶಿವಗೃಹಂಗಳೊಳು ಮೊಯ್ದೇವಿ |
ಪರಿಮಿತದೊಳಾಲೋಕನಂಗೆಯ್ದು ನಿಶ್ಚಯಿಸಿದಳು ದೇವಸೀತನೆಂದು ||೩೭||
ನಿಮ್ಮನಾರೆಂದರಿಯದುರೆ ಸೇವೆಗೊಂಡ ದು |
ಷ್ಕರ್ಮಿಯಂ ಸರ್ವಾಪರಾಧೆಯಂ ಕರುಣಿಸೆ |
ನ್ನಮ್ಮಹಂ ಕುಡಿವರಿವ ಮಾಳ್ಕೆಯಿಂದೆಂದು ಮಾಯ್ದೇವಿ ಸಾಷ್ಟಾಂಗವೆರಗಿ ||
ಮಮ್ಮಲಂಮರುಗುತಿರೆ ನೋಡಿ ಕಾರುಣ್ಯದಿಂ |
ದಮ್ಮಹೈಶ್ವರ್ಯವಿತ್ತುಪದೇಶಗೊಟ್ಟು ನಿ |
ನ್ನಮ್ಮಳದ ವೇಳೆಯೊಳು ನೆನೆ ತವಿಪೆವೆನುತಲಭಯವನಿತ್ತನಾಸದ್ಗುರು ||೩೮||
ಚಿರಕಾಲ ಸುಖಮಿರೆಂದಾಕೆಯಂ ಸಂತವಿ |
ಟ್ಟರಿಸಿ ಮಂಗಳವಾಡದಿಂ ನೆಗೆದು ಸುರಪಥಾಂ |
ತರದೊಳು ವಿಭೀಷಣಂಸಹಿತ ಲಂಕಾಪುರಿಗೆ ಬಂದು ಪರಿತೋಷದಿಂದೆ ||
ಪರಮೇಶಮತ್ಸ್ಯಕೇಶ್ವರನ ಸನ್ನಿಧಿಯಲ್ಲಿ |
ಧರಿಸಿ ಕೋಟಿತ್ರಯಾಚಾರ್ಯರೂಪವ ನಾದಿ |
ಗುರು ಸಕಲಪರಿಜನಂ ಪರಿಚಾರಕತ್ವವನನುಗ್ರಹಿಸಲೊಪ್ಪಿದ್ರ್ದನು ||೩೯||
ಗಂಗೆ ಗೌತಮಿ ಗಂಡಕಿಗಳಿಂದೆ ಬಂದ ಶಿವ |
ಲಿಂಗಕೋಟಿತ್ರಯವ ನೊಂದೇಮುಹೂರ್ತದೊಳ |
ಗಂಗೀಕರಿಸಿ ಗಾರ್ಗ್ಯಮಾಂಡವ್ಯಶುಕ್ರಸುರಗುರುಗಳಭಿನುತಿಸುತಿರಲು ||
ಲಿಂಗಾಂಗಿಜನದಂತರಂಗಾನುಷಂಗಿ ದಿ |
ವ್ಯಾಂಗಂ ವಿನಿರ್ಜಿತಾನಂಗಂ ಪ್ರತಿಷ್ಠೆಗೆ |
ಯ್ದಂ ಗುರೂತ್ತಮರೇವಣೇಶ್ವರನು ಜನನಭಯಹರನು ಸುಗುಣಪ್ರಸರನು ||೪೦||
ರೇವಣೇಶಂಗಗ್ರಪೂಜೆಯಂ ಮಾಡಿ ಸಂ |
ಭಾವಿಸಿ ಪದೋದಕವನೀಂಟಿ ತುತಿಗೆಯ್ದು ಕರು |
ಣಾವಲೋಕನದಿನೆನ್ನಂ ಪಾಲಿಸಿದೆ ಧನ್ಯನಾದೆನೆಂದಾನಂದದಿಂ ||
ಪಾವನಾತ್ಮಕವಿಭೀಷಣನು ಬೀಳ್ಕೊಟ್ಟನಾ |
ಶೈವದೀಕ್ಷಾಗುರುವನೋಲೈಸಿ ಬಂದು ತ |
ನ್ನಾವಾಸದೆಡೆಗೆ ಕಳುಹಿಸಿಕೊಂಡರಗ್ಗದತಪೋಧನರು ನಲವಿನಿಂದೆ ||೪೧||

ಶರಧಿಯಂ ಸೊರೆದು ತಣಿವಿಲ್ಲದಾಕಾಶಕ್ಕೆ |
ಸುರನದಿಯನೀಂಟುವೆನೆನುತ್ತೆ ವಡಬಾನಲಂ |
ಬರುತಿರ್ದಪುದು ತಾನೆನಲು ತನುಪ್ರಭೆ ಚಮತ್ಕರಿಸೆ ನೋಡಿದರ ಕಣ್ಗೆ ||
ಗುರುಕಲಾಂಬುಜನಭೋಮಣಿ ಲಂಕೆಯಿಂದೆ ನೆಗೆ |
ದೆರಲಸರಣಿಗೆ ಮನೋವೇಗದಿಂದಂ ಕಕು |
ದ್ಗಿರಿಗೆ ಬಂದಿದು ಕಣಾದಂಗೆ ಶಿವನೊಲಿದೆಡೆಯಲಾ ಎನುತ್ತುತ್ಸವಿಸಿದಂ ||೪೨||

ಮುನಿಪತಿವಿಭಾಂಡಕತನೂಭವನು ಋಷ್ಯಶೃಂ |
ಗನು ಕಾಣುತಾಮಹಾಶೈಲದಾಶ್ರಮದೊಳಿ |
ರ್ದನುನಯದಿನಿರ್ವಂದು ನಮಿಸಿ ತನ್ನೊಡನಿರ್ದ ಸಂಯಮಿಕದಂಬಸಹಿತಂ ||
ಅನುಕರಿಸಿ ಶಿಷ್ಯಭಾವಮನಿರಿಸಿ ಯುನ್ನ ತಾ |
ಸನಮನಿತ್ತರ್ಘ್ಯಪಾದ್ಯವ ನಿಂದು ಜೂಟನಂ |
ದನನ ಬೆಸಗೊಂಡನೀಕ್ಷೇತ್ರಮಾಹಾತ್ಮ್ಯವ ನಿರೂಪಿಸಲ್ವೇಳ್ಪುದೆಂದು ||೪೩||

ಕೇಳ್ದೈ ತಪೋಧನಲಲಾಮ ಗಂಗಾಧರನ |
ಲೀಲೆಯಂ ಪೂರ್ವದೊಳ್ ಬ್ರಹ್ಮರ್ಷಿದೂರ್ವಾಗ್ರ* |
ಕೀಲಾಲಕಣಮ ನಾಹಾರಮಂ ಕೊಂಡು ತಿಂಗಳಿಗೊಮ್ಮೆ ತುಟ್ಟಿವಡೆದು ||
ನೀಲಲೋಹಿತನ ಲೀಲೆಯನಂತರಂಗದೊ |
ಳ್ಕೀಲಿಸಿ ಮಹೋಗ್ರದಾರಣ್ಯಮಧ್ಯದೊಳಿರ್ದು |
ಕಾಲವಗಣಿತ ಸವೆಯೆ ತಪಮಿರ್ದನೀಗಿರಿಯ ಶಿಖರದೊಳ್ನಿಂದೊರ್ವನೆ ||೪೪||

ಆ ಋಷಿಯ ತಪಕೆ ಕಡುಮೆಚ್ಚಿ ಗಿರಿರಾಜಕ |
ನ್ಯಾರಮಣನುತ್ತಮಾಂಗದೊಳಿಂಬುವಡೆದ ಭಾ |
ಗೀರಥಿಯನಿಳುಹಿ ಪಂಚಾಗ್ನಿಮಧ್ಯದೊಳಿರ್ದ ತಸ್ಮನಿಯಮೇಲೆ ತಳಿದು ||
ಧಾರಿಣಿಗಿದಧಿಕಪುಣ್ಯಕ್ಷೇತ್ರವೆಂದುಪಿ |
ಸ್ತಾರಿಸಿ ನಿರೂಪಮಂ ನೆಲೆವೆತ್ತನಿಲ್ಲಿಯೆಂ |
ದಾಋಷ್ಯಶೃಂಗಂಗೆ ಪೇಳ್ದನನುರಾಗದಿಂ ರೇವಣಾಸಿದ್ಧೇಂದ್ರನು ||೪೫||

ಯತಿರಾಜರಾಜನಿನ್ನಮೃತವಾಕ್ಕತಿಕೃತಾ |
ರ್ಥತೆಯನೆಯ್ದಿಸಿತೆನ್ನನೆಂದು ಶಿಶ್ರೂಷೆಯಂ |
ಕತಿಪಯದಿನಂ ರಚಿಸಿಕೊಂಡಿರಲು ಪೋಗಿಬಂದಪೆವೆಂದು ಪೇಳ್ದಾತಗೆ ||

* ಪಾ|| ಲೀಲೆಯಂಪೂರ್ವದೊಳ್ ಬ್ರಹ್ಮರ್ಷಿಯುಚಿತಾದ | ಕೀಲಾಲಕಣಮ

ಕ್ಷಿತಿನುತನು ರೇವಣೇಶ್ವರನು ಗೀರ್ವಾಣಪಥ |
ಗತಿಯೊಳೊಸೆದೆಳ್ತಂದು ಕಂಡು ಕೂಷ್ಮಾಂಡಪ |
ರ್ವತಮನಡರ್ದಲ್ಲಿ ಮೂಲೋಕಪ್ರಸಿದ್ಧಶಿವಲಿಂಗಮಂ ನಿಟ್ಟಿಸಿದನು ||೪೬||

ಸುರಕಾಂತೆಯರೆ ನರ್ತಕಿಯರು ತುಂಬುರನಾರ |
ದರೆ ಗಾಯಕರು ಮತಂಗಾದಿಗಳೆ ಮಾರ್ದಂಗಿ |
ಕರುಗರುಡಗಾಂಧರ್ವಸಿದ್ಧವಿದ್ಯಾಧರರೆ ಪರಿಚಾರಕರ ವಂಗಡಂ ||
ಪರಮಮುನಿವಲ್ಲಭರೆ ಪರಿಕೀರ್ತನಂಗೆಯ್ವ |
ವರು ಗಣೇಶ್ವರರು ನಿಜಪರಿವಾರವಾಗೆ ಶಂ |
ಕರನು ಕೂಷ್ಮಾಂಡನಂ ಸಲಹಲೋಸುಗ ಬಂದು ನೆಲಸಿದೆಡೆಯಂ ಕಂಡನು ||೪೭||

ನೋಡಿದೊಡೆ ಸೋಂಕಿದೊಡೆ ಸವಿದೊಡವಗಾಹನಂ |
ಮಾಡಿದೊಡೆ ಜನದ ಭವಪಾಶಬಂಧವನು ಪರಿ |
ದೀಡಾಡುವವನಿ ಪಾಲ್ತೊರೆ ಸೀರೆ ಹೆನ್ನೆ ಪೆಣ್ಣೆಯೆನಿಪ್ಪವೈದುತೀರ್ಥಂ ||
ನಾಡೆ ಸೊಗಯಿಸುವೀಗಿರಿಯ ನಿರ್ಝರದಿನೊಗೆದು |
ನಾಡಿನೊಳ್ನಾಲ್ದೆಸೆಯೊಳಂ ಪರಿದು ವಾರ್ಧಿಯೊಡ |
ಗೂಡಿಡುವಲಾ ಎನುತೆ ಪೊಗಳ್ದನಾ ರೇವಣಪ್ರಭು ಮಹಾಕ್ಷೇತ್ರದಿರವಂ ||೪೮||

ಗುಹಗಿರಿ ಬ್ರಹ್ಮಗಿರಿ ವಿಷ್ಣುಗಿರಿ ನಂದಿಗಿರಿ |
ಯಿಹಪರದ ಮಹಿಮೆಯಂ ಕುಡಬಲ್ಲ ದಿವ್ಯಗಿರಿ |
ವಹಿಸಿರ್ಪುವಲ್ಲಿ ಶಂಭುವಿಗೆ ತಪಮಿದ್ದು ಷಣ್ಮುಖವಿಧಿವನೇಜಾಕ್ಷರು ||
ಬಹುಳವೃಂದಾರಕರು ಕಾಮಿತಫಲಂಗಳಂ |
ವಿಹಿತಮಾಗಿರೆ ಪಡೆದರಾ ಸ್ಥೈರ್ಯದಾಣಮಂ |
ಸಹಜಪರಮಾನಂದ ಸಂಪನ್ನರೇವಣಾಸಿದ್ಧೇಶನೀಕ್ಷಿಸಿದನು ||೪೯||

ಶುಕಪುಲಸ್ತ್ಯಾತ್ರಿರೋಮಶಭೃಗುದಧೀಚಿಕೌ |
ಶಿಕಮುಖ್ಯಮುನಿಗಳಾ ರುದ್ರಶೈಲದೊಳಿರ್ದು |
ಮುಕುತಿವೆಣ್ಣರೆಯನಂ ಸಿದ್ಧೇಶನಂ ಕಂಡು ಪಾದಪೂಜೆಯನೊಡರ್ಚಿ ||
ಮುಕುಳಿತಾಂಜಲಿಗೆಯ್ದು ಭಕ್ತಿಯಿಂ ದೇವ ನೀಂ |
ಪ್ರಕಟಿಸೀಲಿಂಗಕ್ಕೆ ನಂದೀಶನಾಮಧೇ |
ಯಕವೆಂತುಕ್ಕೆಸಾರ್ದುದಾಕಥೆಯನೆಂದೊಡಾ ಸಿದ್ಧೇಂದ್ರನಿಂತೆಂದನು ||೫೦||

ಪಡೆದು ಸಾರೂಪ್ಯಪದಮಂ ನಂದಿಕೇಶ್ವರನು |
ಮೃಡನೋಲಗದೊಳಿರ್ದ್ದಪಶುಪತಿ ನಿರೂಪಿಸಲು |
ನಡೆದು ಬರುತಿರೆ ಕರೆಯಲೆಂದು ಗಿರಿಜಾತೆ ಕಂಡೀಶ್ವರನೆನುತ್ತೆ ಬಗೆದು ||
ಒಡನಿಹ ಸಖೀಜನಂಸಹಿತಲಿದಿರ್ವರಲು ಕಂ |
ಡಡಿಗೆರಗಿ ಕಳುಹಿ ಕಾತ್ಯಾಯನಿಯನಿಂದುಧರ |
ನೆಡೆಗೆ ಪಾಪಂ ಸಂಭವಿಸಿತಿದಕ್ಕೆಂತೆಂದು ನಂದಿ ಮನದೊಳ್ಮರುಗಿದಂ ||೫೧||

ನಂದಿಕೇಶ್ವರನ ದುಗುಡವನರಿದು ಕೂಷ್ಮಾಂಡ |
ನಂದು ಪೇಳ್ದೀಗಿರಿಯ ಮಾಹಾತ್ಮ್ಯಮಂ ಕೇಳಿ |
ಬಂದಿಲ್ಲಿ ತಪಮಿರ್ದ್ದು ರಜತಾಚಲಮನೆಯ್ದಿ ಸಾಯುಜ್ಯಪದವ ಪಡೆದು ||
ಅಂದಿಂದೆ ನಂದಿನಾಥನೆನಿಪ್ಪ ನಾಮಧೇ |
ಯಂದಳೆದುದೀದಿವ್ಯಲಿಂಗವೆಂದರಿಹಿ ಮುನಿ |
ವೃಂದಕ್ಕೆ ಮುದವನಾಗಿಸಿ ಕೆಲವುದಿವಸವಲ್ಲಿರ್ದ್ದನಾ ಸಿದ್ಧೇಂದ್ರನು ||೫೨||

ಆಮುನಿಗಳಂ ನಿಲಿಸಿ ಪೋದಪೆನೆನುತ್ತೆ ವಿ |
ದ್ಯಾಮೂರ್ತಿ ಪೇಳ್ದು ಗಗನಕೆ ನೆಗೆದು ಋಗ್ಯಜು |
ಸ್ಸಾಮಾದ್ಯನೇಕವೇದಂಗಳರಿಕೆಗೆ ನಿಲುಕದೊಪ್ಪುವ ವಿರೂಪಾಕ್ಷನು ||
ಭಾಮೆ ಪಂಪಾದೇವಿಸಂಯುತಂ ನೆಲಸಿರ್ದ್ದ |
ಹೇಮಾದ್ರಿತಾರಾದ್ರಿಮಂದರಾದ್ಯಪ್ರತಿಮ |
ಹೈಮಕೂಟಾಚಲಮನಡರ್ದು ತದ್ಗಿರಿಯ ತೀರ್ಥಾಲೋಕನಂಗೆಯ್ದನು ||೫೪||

ಸರಿಸದಿಂ ಪೂರ್ವಪಶ್ಚಿಮದಕ್ಷಿಣೋತ್ತರದೊ |
ಳಿರೆ ಕಿನ್ನರೇಶ್ವರಂ ಜಂಬುಕೇಶ್ವರನತಿ |
ಸ್ಫುರಿತಸೋಮೇಶ್ವರಂ ಪಾಣಿಭದ್ರೇಶ್ವರಂ ದ್ವಾರಪಾಲಕರ್ಗಳಾಗಿ ||
ಪರಮಪುಣ್ಯಾಶ್ರಮಸಮೂಹದಿಂ ಮಿಸುನಿದಾ |
ವರೆ ಪುದಿದ ತಿಳಿಗೊಳಂಗಳಿನಖಿಲ ಲಿಂಗದಿಂ |
ಪರಿಶೋಭಿಸಿತ್ತು ಪಂಪಾಕ್ಷೇತ್ರವನುಪಮ್ಯವಿಚಿತ್ರ ವಿಳಿವೆಣ್ಣನೇತ್ರಂ ||೫೫||

ಇಳೆಗಿಳಿದ ಸಹ್ಯಪರ್ವತಸಿಕತದಿಂ ಸಮು |
ಜ್ಜ್ವಲಿಸುತಿಹ ತುಂಗೆಭದ್ರೆಗಳೆಂಬ ನದಿಯುಕೂ |
ಡಲೆನಿಪ್ಪ ತುಂಗಭದ್ರೆಗಳ ತೀರದೊಳೊಂಬುಯೋಜನಪರಿಪ್ರಮಾಣಂ ||

ಬಳಸಿ ಸೇವಿಪ ಕಪಿಲವಾಮನ ವಸಿಷ್ಠ ಮು |
ದ್ಗಲ ಮುಖ್ಯಮುನಿಗಳಾಶ್ರಮವೊಪ್ಪೆ ಪಂಪೆ ಕಂ |
ಗಳಿಗೆ ಸಂತಸಮನಿತ್ತುದು ವಿರೂಪಾಕ್ಷನಿಹ ಮಣಿಮಾಡವೆಸಕದಿಂದೆ ||೩೩||

ನೋಡಿ ಪಂಪೆಯ ಪೆಂಪ ನಾಚಾರ್ಯಶೇಖರಂ |
ಮಾಡಿ ಮನದೊಳ್ಮುದಮು ನೆಲವಟ್ಟಿಯಡರ್ದಿಟ್ಟು |
ನೀಡಡಿಯನಿಟ್ಟು ಮಂಗಳವಾಡಮಂ ಪೊಕ್ಕು ವೀರಬಿಜ್ಜಳನೆನಿಸುವ ||
ನಾಡಾಣ್ಮನಂ ಪಾಣಿಪಾತ್ರೆಯಿಂ ಭಿಕ್ಷೆಯಂ |
ಬೇಡಲಾ ದುರುಳನುಕ್ಕುವ ಪಾಯಸಾನ್ನಮಂ |
ನೀಡಸಿದೊಡೆಳನಗೆ ಮೊಗದೊಳುಣ್ಮೆ ಕಯ್ಕೊಂಡು ನಿಂದನಾಸ್ಥಾನದೊಳಗೆ ||೩೬||

ಆನೃಪತಿ ನಡನಡುಗಲಾ ಭಿಕ್ಷೆಯಂ ಧರಿಸಿ |
ಮಾನವ ಮಹೇಶನೋಲಗದ ಶಾಲೆಯ ನವ್ಯ |
ಕಾನಕಸ್ತಂಭದೊಳು ಕಯ್ದೊಡೆಯಲುರಿಗೊಂಡು ಭುಗಿಲೆಂದು ದಹಿಸಲೊಡನೆ ||
ಆನೆಸಾಲೆಗಳಶ್ವಶಾಲೆಗಳು ಮುಂತಾದ |
ಸೂನರಾಜಾವಾಸವೆಲ್ಲ ಬೆಳಗಲು ಕಾಣು |
ತಾ ನರಾಧಿಪ ಭೀತಿಯಿಂ ಪಾಲಿಸೆಂದು ಮೆಯ್ಯಿಕ್ಕಿದನು ಭೂತಳದೊಳು ||೩೭||

ಕರುಣಾಕಟಾಕ್ಷದಿಂದೀಕ್ಷಿಸಲು ರೇವಣೇ |
ಶ್ವರನಾ ನೃಪನನಾಕ್ಷಣಂ ಮುನ್ನಿನಂತೆ ವಿ |
ಸ್ತರದ ರಾಜಾವಾಸವೊಪ್ಪುತಿರ್ದುದು ಪೊಸತಿದೆಂದು ನೋಟಕರು ಪೊಗಳೆ ||
ಸರಿಮಳೆಗಳೆರಗಿ ಪಟ್ಟಣದೊಳಗೆ ತಣ್ಪಾಯ್ತು |
ಹರಭಕ್ತರಾನಂದರಸದೊಳೋಲಾಡೆ ಬಂ |
ಧುರ ರತ್ನತೋರಣಂಗಳು ಮೆರೆದುವೆತ್ತಿದುಪ್ಪರಗುಡಿ ಬೆಡಂಗಾಗಲು ||೩೮||

ಸ್ವಾಮಿ ನೀವಾರೋಗಣೆಯ ಮಾಡವೇಳ್ಪುದೆಂ |
ದಾಮಹೀಪತಿ ವೀರಬಿಜ್ಜಳಂ ಬೇಡಿಕೊಳ |
ಲೀ ಮಹಾಕಟಕಸಹಿತಲ್ಲದಾರೋಗಿಸುವುದಿಲ್ಲವಾವೆಂದು ಬೆಸಸೆ ||
ಕೈಮುಗಿದು ಜನಜಲಧಿಯಿದಕೆ ಜೋಡಿಸಲು ನೋ |
ಡಾಮೊಗಸುವವನಾವ ನಾನಮ್ಮೆ ನೆನಲೇಳು |
ತಾಮಸಂಗೆಯ್ಯದಾವೇ ಬಗೆಯ ಮಾಳ್ಪೆನೆಂದನು ರೇವಣಾಚಾರ್ಯನು ||೩೯||

ಐದುಸೊಲ್ಲಗೆ ಘೃತಮ ನೈದುಮಾನಕ್ಕಿಯಂ |
ಸಾದರದೊಳಾನೃಪನ ನಿಳಯದಿಂ ತರಿಸಿ ಜಗ |
ದಾದಿದೇಶಕನು ಸೋಂಕಲು ಪಂಚಭಕ್ಷ್ಯ ಪಾಯಸ ಪದಾರ್ಥಗಳ ರಾಶಿ ||
ಐದೆ ಬಳೆದಾಗ ಸಂಬರಮೊಪ್ಪುತಿರೆ ಕಂಡು |
ಮೇದಿನಿಗಿದಾಶ್ಚರ‍್ಯಮೆಂದುನಿಶ್ಚಿತಚಿತ್ತ |
ನಾದನರಸನು ನವ್ಯದಿವ್ಯಾನ್ನದಿಂ ತಣಿದುದಾ ಮಹಾಕಟಕವೆಲ್ಲಂ ||೬೦||

ಸುರಿದು ಮಣಿಗಣವ ನಡಿದಾವರೆಯ ಮೇಗೆ ಭೂ |
ವರ ವೀರದಿಜ್ಜಳಂ ಪೂಜಿಸಲ್ಪೋಪೆನೆಂ |
ದರಸ ಸುಖಿಯಾಗಿರೆಂದಷ್ಟಶಿಖೆ ಜಡಿಯೆ ರನ್ನದಲಾಕುಳಂ ಪೊಳೆಯಲು ||
ಕರಮೆಸೆಯೆ ಯೋಗವಾವುಗೆ ವಜ್ರಕುಂಡಲಂ |
ಕಿರಣಮಂ ಕೆದರೆ ಕನಕದ ಕಂಥೆ ತಳತಳಿಸೆ |
ಸುರಪಥಕೆ ನೆಗೆದನಾ ರೇವಣಾಸಿದ್ಧ ನಾರಾಧ್ಯ ಕುಲಚಕ್ರವರ್ತಿ ||೬೮||

ಗಗನಗಮನದೊಳೆಯ್ದಿ ಚರಲಿಂಗಮೂರ್ತಿ ಕಡು |
ಸೊಗಯಿಸುವ ಕೊಲ್ಲಾಪುರದ ರಾಜವೀಧಿಯೊಳು |
ನಗುತ ಕೌಟಿಲ್ಯವಿದ್ಯಾಸಿದ್ಧರಂ ನೋಡಿ ಪಳಿದು ಕಟಕಿಯನಾಡುತ ||
ಮಿಗೆ ಕೆರಳಿಸುತ್ತೆ ಬರುತಿರೆ ಗತಿಸ್ತಂಭಮಂ |
ತ್ರಗಳ ನುಚ್ಚರಿಸಲವು ತಮಗಾಗೆ ಕಂಡು ಸೋ |
ಜಿಗವಾಗೆ ನಾಸಿಕಾರ್ಪಿತಕರಾಂಗುಲಿಗಳಾಗಿರ್ದ್ದುದಾ ಸಿದ್ಧವಿತತಿ ||೬೨||

ಉಳುವ ಹೇರುವ ಜೀವಧನವಿಲ್ಲಿ ಕರಡಿ ಪೆ |
ರ್ಬುಲಿ ಸೊಕ್ಕಿದೆಕ್ಕಲಂ ಮುಂತಾದ ದುಷ್ಟಮೃಗ |
ಕುಲವಖಿಳದೇಶಾಧಿಪತಿಗಳೇ ಸೇವಕರು ನೆನೆದ ವೇಳೆಯೊಳಿಷ್ಟಯಂ ||
ಸಲಿಸುವರು ಯಕ್ಷಿಣಿಯರೆಂದೆನಿಪ ಗೋರಕ್ಷ |
ವಿಳಯಮೀ ಪೊಳಲಿದರೊಳೆಲ್ಲರಂ ಗತಿಗೆಡಿಸು |
ತಳವುಗೆಡಿಸುತ್ತೆ ಬರುತಿರ್ದ್ದಪ ನಿದಾರೆಂದು ಪೌರಜನ ಸಂದಣಿಸಿತು ||೬೩||

ಚೌರಂಗಿ ಮತ್ಸ್ಯೇಂದ್ರ ನಾದಿನಾಥಂ ಬುದ್ಧ |
ಕೋರಾಂಟಕಂ ಭೂತನಾಥ ಮೊದಲಾಗಿರ್ದ್ದ |
ಪಾರಸಿದ್ಧರ ಕುವರ ರೀತ ಸಾಕ್ಷಾತ್ಸದಾಶಿವನಾಗನೇಳ್ಪುದೆಂದು ||

ಆರೈವುತಿರೆ ಕಾಣಿಸದೆ ತಾಮಸತ್ವಮಂ |
ಪೂರೈಸುತವರ ಹೃದಯದೊಳು ಮೆಲ್ಲಗೆ ಬಂದು |
ಗೋರಕ್ಷನಿರ್ದ್ದೆಡೆಗೆ ಪಾಣಿಪಾತ್ರೆಯೊಳು ವರಗುರುಭಿಕ್ಷೆಯಂ ಬೇಡಿದಂ ||೬೪||

ಅರವತ್ತುನಾಲ್ಕುಯೋಗಿಣಿಯರೆನ್ನೋಲಗದ |
ತರುಣಿಯರು ಸಕಲವಿದ್ಯಾಸಿದ್ಧಿ ಮನೆದೊತ್ತು |
ಸಿರಿವೆಣ್ಣು ಬೆಸಸಿತಂ ಮಾಳ್ಪ ದೇವತೆ ಪರಮಸಿದ್ಧತತಿ ಸೇವಕಜನಂ ||
ಪಿರಿದುಂ ವಿಚಿತ್ರವೀ ತಾಣಕ್ಕೆ ಭಿಕ್ಷೆಯಂ |
ಧರಿಸಲೆಂದೈತಂದ ಸಿದ್ಧನಾರಿಂತಿವನ |
ಪಂಕಿಪೆನೆನುತ್ತೆ ಸುರಗಿಯ ಭಿಕ್ಷೆಯಂ ನೀಡಿಸಿದನಂದು ಗೋರಕ್ಷಕಂ ||೬೫||

ಗೋರಕ್ಷಕನ ರಾಣಿ ಚಿಕ್ಕಲಕ್ಕಾದೇವಿ |
ಕೂರಿಯ ಕಠಾರಿಯಂ ಪಾಣಿಪಾತ್ರೆಯೊಳಿಡಲು |
ದಾರಮಹಿಮನು ರೇವಣೇಶ್ವರನು ನೊಸಲ ಕಣ್ದೆರೆದು ಗಿರ್ರನೆ ಕರಗಿಸಿ ||
ಆರೋಗಿಸಲು ಲೋಹರಸಭಿಕ್ಷೆಯಂ ಮಾಡಿ |
ಪೇರುರದೊಳಾ ಸುರಗಿ ವೇದನಿಸೆ ಮರುಗುತಾ |
ಗೋರಕ್ಷನೇವೆನೆಂದೆನುತೆ ಬಾಯ್ಬಿಟ್ಟು ಮಿಟ್ಟನೆ ಮಿಡುಕಿ ಪಂಬಲಿಸಿದಂ ||೬೬||

ಪಿರಿಯ ಲಕ್ಕಾದೇವಿ ಯೆನಿಸುವಾ ಗೋರಕ್ಷ |
ನರಸಿ ಯೆಯ್ತಂದು ಪಾಲ್ಗಡಲಣುಗಿಯೊಳ್ಪೇಳೆ |
ಪರಿತಂದು ಶರಣೆಂದು ಗೋರಕ್ಷನಪರಾಧಮಂ ಕ್ಷಮಿಸಿ ರಕ್ಷಿಸೆಂದು ||
ಕರಕಮಲಮಂ ಮುಗಿದು ಬಿನ್ನೈಸಲುಗುಳ್ದು ಲೋ |
ಹರಸಭಿಕ್ಷೆಯನಾದಿದೇಶಿಕನು ನಸುನಗಲು |
ಸುರಗಿ ಕಳಚಿದುದವನ ಕಾಯದಿಂ ಕೌತುಕಂಬಡಲಖಿಳಯೋಗಿನಿಯರು ||೬೭||

ರಸರಸಾಯನಸಿದ್ಧಿಯೆನಗುಂಟೆನುತ್ತೆ ಗ |
ರ್ವಿಸಿ ನಿಮ್ಮ ಮಹಿಮೆಯಂ ತಿಳಿಯದತ್ಯಂತ ತಾ |
ಮಸಚಿತ್ತನಾಗಿ ಮರುಳಾದೆನೆನ್ನೊಳ್ ಗುಣವ ನರಸದುದ್ಧರಿಪುದೊಲಿದು ||
ಅಸಮನೇತ್ರನೆ ವಿಮಳಪುಣ್ಯಗಾತ್ರನೆ ಸಮು |
ಲ್ಲಸಿತಸಿದ್ಧ ಸ್ತೋತ್ರಪಾತ್ರನೇ ಎಂದು ಕೀ |
ರ್ತಿಸಿ ಯಭಯವಿಯ್ಯೆಂದು ಗೋರಕ್ಷನಾಥನೆರಗಿದನು ಗುರುವಿನ ಪದದೊಳ. ||೬೮||

ಆದಕೇಂ ಪರೀಕ್ಷಿಪುದು ಲೇಸಲಾ ಎಂದು ಸ |
ನ್ಮುದದಿಂದೆ ರೇವಣಪ್ರಭು ನಿರೂಪಿಸಲು ತವೆ |
ಬೆದರಿ ನಾನೇ ಪರೀಕ್ಷಿಪ ಸಮರ್ಥಂ ನಿಮ್ಮನೆಲೆದೇವ ಶಿವಧರ್ಮದ ||
ಪದವಿಂತಿದೆಂದರಿಹಿ ಮುಕ್ತಿಗಾಣಿಪುದು ಕರು |
ಣದೊಳೆಂದು ಬಿನ್ನಯಿಸಲೊಲವಿನಿಂ ಗೋರಕ್ಷ |
ನದಟಳಿದ ಭಾವಮಂ ಕಂಡು ಶಿವಸಿದ್ಧಪತಿಚಕ್ರೇಶನಿಂತೆಂದನು ||೧೯||

ಕೊಲ್ಲದಿರು ಪುಸಿಯದಿರು ಪಸಿದುಬರಲೊಡನಾರ್ಗ |
ಮಿಲ್ಲೆನ್ನದಿರು ಕುಜನರಿರ್ದ್ದ ತಾಣಂಗಳೊಳ್ |
ನಿಲ್ಲದಿರು ಪರಧನಸತಿ ಕ್ಷಿತಿಯ ನಿನಿತನಪಹರಿಸದಿರು ಸದ್ಗುರುವಿನ ||
ಮೆಲ್ಲಡಿಯ ಸೇವೆಗತಿಲವಲವಿಪ ಚಿತ್ತಮಂ |
ಪಲ್ಲಟಿಸದಿರು ಸಂತತಾನಂದದಿಂ ಶಾಂತ |
ಮಲ್ಲಿಕಾರ್ಜುನನೊಳವಧಾನಿಯಾಗಿರು ಪರಮ ಶಿವಧರ್ಮಪದ್ಧತಿಯಿದು ||೨೦||

ತುರುಬು ಜಡೆ ಬೋಳಿಟ್ಟ ಮಂಡೆಯೆನ್ನದೆ ಶಿವನ |
ಕುರುಹೆಲ್ಲಿ ಕಾಣಿಸಿದುದಲ್ಲಿ ಬಿಡದಿರು ಭಕ್ತಿ |
ಯೆರಕಮಂ ತೋರುವೀ ಬಹುಳ ಸಂಸಾರಸೌಖ್ಯಂ ನಿತ್ಯವಲ್ಲೆಂಬುದಂ ||
ಅರಿದಿರಜ ವಿಷ್ಣುರುದ್ರೇಶ್ವರ ಸದಾಶಿವರಿ |
ಗೆರೆಯಂ ಪರಂಜ್ಯೋತಿ ಪರಮಶಿವನಾತನಿಂ |
ಪೆರತಿಲ್ಲವೆಂಬುದಂ ಬಿಡದೆ ನಿಶ್ಚೈಸಮಳ ಶಿವಧರ್ಮಪದ್ಧತಿಯಿದು ||೨೧||

ಎಂದು ಗೋರಕ್ಷಂಗೆ ಪರಮಶಿವಧರ್ಮಪದ |
ಮಂ ದಯದಿ ವಿಸ್ತರಿಸೆ ಸಾಷ್ಟಾಂಗದಿಂದೆರಗಿ |
ನಿಂದಿರಲು ಪರಸಿ ಪೋದಪೆವೆಂದು ಪೊಳಲಿಂದೆ ಧೀಂಕಿಟ್ಟು ಗಗನದೆಡೆಗೆ ||
ಬಂದಯೋಧ್ಯೆಯನು ಮಧುರೆಯ ನವಂತಿಯನು ಜಾ |
ಳಂಧರವ ಮಾಯಾಪುರವ ಪೊಕ್ಕು ಶಿವಧರ್ಮ |
ಮಂ ದಿಕ್ಕುದಿಕ್ಕಿನೊಳು ಪಸರಿಸಿದನಾ ರೇವಣಾಸಿದ್ಧಗುರುರಾಯನು ||೨೨||

ಗುರುಶಾಂತ ಬಾಲೇಶ್ವರನು ಬೆಸಸಲಾಂ ಮನೋ |
ಹರಮಾಗಿ ಪೇಳ್ದ ಸಿದ್ಧೇಶ್ವರ ಪುರಾಣದೊಳು |
ಪರಮೇಶನಣುಗಂ ತ್ರಿಕೋಟಿ ಲಿಂಗಪ್ರತಿಷ್ಠೆಯ ಲಂಕೆಯೊಳ್ವಿರಚಿಸಿ ||

ಮರಳಿ ತೀರ್ಥಂಗಳಂ ನೋಡಿ ಮಂಗಳವಾಡ |
ಪುರಕೆ ಬಂದಲ್ಲಿಂದೆ ಕೊಲ್ಲಾಪುರದೊಳು ಸಂ |
ಸ್ಫುರಿಸಿ ನಿಜತೇಜಮಂ ದೇಶಾಂತರಂಗೆಯ್ದ ಕಥೆಯಿದಾರನೆಯಸಂಧಿ ||೭೩||

## ಆರನೆಯ ಸಂಧಿಯು ಮುಗಿದುದು.

ಶ್ರೀಗುರುಪರಬ್ರಹ್ಮಣೇನಮಃ.

## ( ಏಳನೆಯ ಸಂಧಿಯು. )

ಸೂಚನೆ || ಶರಧಿಯೇಳರ ನಡುವಣೆತಿಟ್ಟುಗಳೊಳು ಸಂ |
ಚರಿಸಿ ಪರ್ವತಮಹಾಗಿರಿಶಿಖರದೊಳ್ನಿರಂ |
ತರಸುಖದಿನಲ್ಲಿದ್ದು ವಾರಾಣಸಿಗೆ ಬಂದನಾ ರೇವಣಾಸಿದ್ಧನು ||

ಶರ್ವ ಶಂಕರ ನೀಲಕಂಠ ಸಾಮರ್ಗ್ಯಜುರ |
ಥರ್ವಣಾಮ್ನಾಯನುತ ತರುಣಚಂದ್ರಾಭರಣ |
ಸರ್ವಪರ್ವತಸಾರ್ವಭೌಮಕನ್ಯಾಘನಸ್ತನನಟತ್ತರಳಹಾರಾ ||
ಗೀರ್ವಾಣಯಕ್ಷ ಕಿನ್ನರಸಿದ್ಧಗರುಡಗಾಂ |
ಧರ್ವವಿದ್ಯಾಧರಪ್ರಕಟಮಣಿಮಕುಟರೋ |
ಚಿರ್ವಲಿತಪದ ಸಲಹು ಶಾಂತಮಲ್ಲೇಶ್ವರಾ ಸ್ವರ್ವಾಹಿನೀಶೇಖರಾ ||೧||

ಚಾರೂದಕಂ ದುಗ್ಧ ದಧಿ ಘೃತಂ ಮಧು ಏಕ್ಷು |
ಸಾರಲವಣವೆನಿಪ್ಪ ವಾರ್ಧಿಗಳ ನಡುವೆ ವಿ |
ಸ್ತಾರಪುಷ್ಕರ ಶಾಕ ವಿಶ್ರುತಕ್ರೌಂಚ ಕುಶ ಶಾಲ್ಮಲಿ ಪ್ಲಕ್ಷ ಜಂಬು ||
ಓರಣದಿನೆಸೆವುವೇಳುದ್ವೀಪವಿವ ಪೊಕ್ಕು |
ಪಾರಶಿವಧರ್ಮಮಂ ಪ್ರಕಟಿಸಿದನಮಮ ಮದ |
ನಾರಿಯಾತ್ಮಜ ರೇವಣಾಸಿದ್ಧಗುರುನಾಥ ನಾನತೌಘಸಹಾಯನು ||೨||

ನೀಲಾದ್ರಿ ನಿಷಧಗಿರಿ ಗಂಧಮಾದನ ಮಾಲ್ಯ |
ಶೈಲ ವಿಂಧ್ಯಾಚಲಂ ದೇವಕೂಟಾಖ್ಯಕು |
ಕ್ಷೈಲ ಮಂದರನಗಂ ಕಾಂಚನಕುಧರ ಸುಹರ್ಷಣ ರೋಹಣಕ್ಷಿತಿಧರಂ ||

ಪ್ರಾಲೇಯಭೂಧರಂ ಕೈಲಾಸಶಿಖರಿ ಲೋ |
ಕಾಲೋಕಸಾನುಮಂತಂ ಮುಖ್ಯವಾದ ಸುವಿ |
ಶಾಲ ಪುಣ್ಯಕ್ಷೇತ್ರದಲ್ಲಿ ದೇಶಾಂತರಂಗೆಯ್ದನಾ ಸಿದ್ಧೇಶನು ||೩||

ಇಂತು ಪಲವುಂ ಸ್ಥಪುದಾಣಮಂ ಪೊಕ್ಕು ದೇ |
ಶಾಂತರಂ ಮಾಡುತ್ತೆ ನಡೆತಂದು ಪರಮಗುರು |
ಶಾಂತಮಲ್ಲೇಶ್ವರಂ ಶೈಲಾದಿಪರ್ವತ ಮಹಾಮುನಿಯ ತಪಕೆ ಮೆಚ್ಚಿ ||
ಕಾಂತೆಸಹಿತಂ ನೆಲಸಿ ದೇವಮನುಮುನಿಸಿದ್ಧ |
ಸಂತತಿ ವಿಲಾಸದಿಂದೋಲೈಸೆ ರಂಜಿಸುವ |
ಸಂತ ಮಹಿಮಾನ್ವಿತ ಶ್ರೀಶೈಲಮಂ ಪೊಕ್ಕನಾ ರೇವಣಾಚಾರ್ಯನು ||೪||

ಬಡಗವಾಗಿಲ್ಮೆರೆವ ಮಾಹೇಶ್ವರಂ ತೆಂಕೆ |
ಗಡೆಯ ಬಾಗಿಲ್ ಜ್ಯೋತಿಸಿದ್ಧವಟವಿಂದ್ರದೆಸೆ |
ಗಡೆಯ ಪೆರ್ಬಾಗಿಲೇ ತ್ರಿಪುರಾಂತಕಂ ಪಡುವಬಾಗಿಲೇ ಬ್ರಹ್ಮೇಶ್ವರಂ ||
ಕಡುಸೊಗಯಿಸಿತ್ತಿಂತು ನಾಲ್ವತೆಣ್ಣಾಗ್ಗುವುದಂ |
ಮೃಡ ಶಾಂತಮಲ್ಲಿಕಾರ್ಜುನ ಲಿಂಗನೊಲಿದೆಡಂ |
ಬಡೆದಿರ್ದ್ದ ಪರ್ವತಂ ಸಕಲ ಕುಲಪರ್ವತಂಗಳಿಗೆ ತಾನಧಿಕಮಾಗಿ ||೫||

ಪರುಸವೇದಿಯ ಪಂಕ್ತಿ ಚಿಂತಾಮಣಿಯ ಮೊರಡಿ |
ಸುರಕುಜದ ತೋಂಟ ಸುರಧೇನುವಿನ ಹಿಂಡು ಸಿ |
ದ್ಧರಸತೀವಿದ ತೊರೆಗಳಮರ್ದಿನ ತಟಾಕಂಗಳ ಪ್ರತಿಮತೀರ್ಥವಿತತಿ ||
ಇರೆ ಕಂಡು ಸಂತಸಂಬಟ್ಟೆಳೆಯ ಮೇಗಿರ್ದ್ದ |
ಗಿರಿಗಳೆಲ್ಲಕ್ಕಿದೇ ಮಿಗಿಲೆಂದು ರೇವಣೇ |
ಶ್ವರನು ಕೀರ್ತಿಸಿದನಾ ಶ್ರೀಪರ್ವತಾಶ್ರಮವ ಸಾಕಲ್ಯಮಾಂಗಲ್ಯವ ||೬||

ಅಂಗಭವಮಥನಪಿಂಗಲ ಜಟಾಜೂಟಾನು |
ಷಂಗೆಯಂ ನಿರ್ಮ್ಮಲೀಕೃತ ಭಜಕಜನದಂತ |
ರಂಗೆಯಂ ದರ್ಶಿತಾನೇಕ ಸಂಪದ್ವಿರಾಜಿತ ರಜತಗಿರಿಶೃಂಗೆಯಂ ||
ಮಂಗಲಗಭೀರಗುಣತುಂಗೆಯಂ ರಂಗತ್ತ |
ರಂಗೆಯಂ ದೋಷಚಯಭಂಗೆಯಂ ಪಾತಾಳ |
ಗಂಗೆಯಂ ಕಂಡನಾ ರೇವಣಾಸಿದ್ಧಗುರು ಪಾನತರ ಕಲ್ಪಕತರು ||೭||

ಪರಿದುದೀಪಾತಾಳಗಂಗೆ ಭವನಾಶಿ ಭೀ |
ಮರಥಿಗಳನೊಡಗಲಸಿ ತುಂಗಭದ್ರಾನದಿಯ |
ಬೆರಸಿ ಸಂಗಡಿಸುತೆ ಮಲಪ್ರಹಾರಿಣಿಕೃಷ್ಣವೇಣಿಯೊಳು ನಾಡೆ ಕೂಡಿ ||
ಸುರನರೋರಗಲೋಕದೊಳಗಿದಕ್ಕೆಣೆಯಾದ |
ವರತೀರ್ಥವಿಲ್ಲೆನುತೆ ಕಣ್ಣಾರೆ ನೋಡಿ ವಿ |
ಸ್ತರಿಸಿದನು ರೇವಣೇಶ್ವರನು ಕರುಣಾಕರನು ನತಜನಾನಂದಕರನು ||೮||

ಆಪರ್ವತದ ತಾರಕಾದ್ರಿಯೊಳು ನೆಲಸಿ ನಾ |
ನಾಪರಮಋಷಿಸಿದ್ಧವಿದ್ಯಾಧರವ್ರಜಂ |
ಶ್ರೀಪಾದಪದ್ಮಮಂ ಸೇವಿಸಲು ವೀರಶೈವೋಪದೇಶಮನೀವುತೆ ||
ಸ್ಥಾಪನಂಬಾಗಿಸುತೆ ಶರಣರ್ಗೆ ಸಂತಸದಿ |
ನಾಪುರಾರಿಯ ಕುಮಾರಂ ವಿರಾಜಿಸುತಿರ್ದ್ದ |
ನೇ ಪೊಳ್ತುಮರ್ಚಿಸುತೆ ಶಾಂತಮಲ್ಲೇಶನಂ ದಿವ್ಯಪ್ರಕಾಶಾಂಗನಂ ||೯||

ಅಳಿಕನೇತ್ರದ ಸಿದ್ಧಶಿವಯೋಗಿರಾಯ ನು |
ಜ್ಜ್ವಳಿಸುವಾ ಪರ್ವತಾಗ್ರದ ತಾರಕಾದ್ರಿಯೊಳು |
ನೆಲೆವಡೆದು ನಿಶ್ಚಲಸ್ವಾಂತ ಶಿವನವಧಾನದಲ್ಲಿರ್ಪ್ಪ ಸಮಯದಲ್ಲಿ ||
ತೊಳತೊಳಗುವತುಳತೇಜೋರಾಶಿ ಪರ್ವಿ ಪರ |
ಕಲಿಸೆ ಮುಕುಳಿತನಯನ ನಳಿನಮನಲರ್ಚ್ಚಿ ವೆ |
ಗ್ಗಳಿಪ ಸಂತೋಷದಿಂ ಗುರುಶಾಂತ ಮಲ್ಲಿಕಾರ್ಜುನಶಿವನ ನೀಕ್ಷಿಸಿದನು ||೧೦||

ತನಿವಾಲ ಫೇನಪಿಂಡದ ಗೊಂದಣದ ವರ್ಣ |
ವನು ಧರಿಸಿದಂಗದ ಜಟಾಜೂಟದಗ್ರದೊಳ್ |
ಮಿನುಗುವೆಳವರೆಯ ಚತುರಾನನ ಚತುರ್ಭುಜಂಗಳ ಪನ್ನೆರಳ್ಕಂಗಳ ||
ಮುನಿಜನದ ಮತಿಗೆ ನಾನಾ ವೇದದರಿಕೆಗೊಂ |
ದಿನಿಸುಸಿಲ್ಕದ ಪುಣ್ಯಮೂರ್ತಿ ಸದ್ಯೋಜಾತ |
ನೆನಿಪ ಶಿವಧರ್ಮದ ಸಮೃದ್ಧಿಯಂ ಕುಡುವ ನಗೆಮೊಗದೊಳೊಪ್ಪಿದನಭವನು ||೧೧||

ದಾಸಣದರಲ್ದಂಡೆಯಂತೊಪ್ಪುವಂಗಪ್ರ |
ಕಾಶದ ಚತುರ್ವದನದೀರೆರಳ್ತ್ರೀಳು ಮಿಗೆ |
ಲೇಸಾಗಿ ಮಿರುಗುವೀರಾರುಕಣ್ಗಳ ಸಕಲವಶ್ಯಮಂ ವಹಿಲದಿಂದೆ ||

ಕೈಸಾರ್ಚುವಮಳಕೇಕರರುಚಿಯ ಮಾಂಗಲ್ಯ |
ವಾಸವೆನಿಸುವ ವಾಮದೇವಮುಖದಿಂ ಸಮು |
ದ್ಭಾಸಿಸಿದ ನಜ್ಞಾನತಿಮಿರಮಂ ಪರಿಯಿಪ ಪರಂಜ್ಯೋತಿರಾಕಾರನು ||೧೩||

ಭಿನ್ನಾಂಜನಚ್ಛಾಯೆಯಂತೆವೋಲೊಪ್ಪುವ ಸ |
ಮುನ್ನತತನುಪ್ರಭೆಯ ಕಾರುಮಿಂಚಿನ ಕಾಂತಿ |
ಯನ್ನಿವಾರಿಪ ದೀರ್ಘದಂಷ್ಟ್ರದ ಚತುರ್ವಕ್ತ್ರದೀರೆರಳ್ನಿಡಿಯ ಭುಜದ ||
ಸನ್ನಿಧಿಯೊಳಿರ್ದು ಭಜಿಸಲ್ ಸರ್ವಶತ್ರುಜಯ |
ಮನ್ನೆಟ್ಟನಿತ್ತು ಪಾಲಿಸುವಘೋರಾರಸ್ಯದಿಂ |
ದನ್ನಿರುಪಮಾನಚಿತ್ರಚರಿತ್ರನೆಸೆದಿರ್ದ್ದ ನೀರೇಳ್ಜಗಕ್ಕೊಡೆಯನು ||೧೪||

ಪೊಂಗುವತಿದೀಧಿತಿಯ ಪುಷ್ಯರಾಗದ ಪೊಳಪ |
ನಂಗೀಕರಿಸಿದ ವರ್ಣದ ಶರೀರದ ಮಹೋ |
ತ್ತುಂಗಚಾತುರ್ಭುಜದ ನಾಲ್ಮೊಗದ ನಿಖಿಲಸಿದ್ಧಿಯನೀವ ಕುಡಿನೋಟದ ||
ಶೃಂಗಾರನಿಧಿ ನಯನವೀರಾರರಿಂ ಸಲೆ ಬೆ |
ಡಂಗಾಗಿ ತತ್ಪುರುಷಮುಖದೊಳ್ಪೊಪ್ಪಿದ ನಮರ |
ಗಂಗಾತರಂಗೋತ್ತಮಾಂಗ ನಗಜಾನ್ವಿತಾರ್ಧಾಂಗ ಖುಷಭತುರಂಗನು ||೧೫||

ತೊಳೆದ ಮುತ್ತಿನ ಥಾಳಮಂ ತಿರಸ್ಕರಿಪ ಮೊ |
ಕ್ಕಳದ ಮೈಸಿರಿಯ ನಾಲ್ದೋಳ ವದನಚತುಷ್ಕ |
ದೆಳಸಾಗರಾಭರಣದೀರಾರುಕಣ್ಮರಲ ಕೈವಲ್ಯಸುಖದ ಸೊಗಸ ||
ಅಳವಡಿಸುವೀಶಾನಲಪನದಿಂ ಭಕ್ತಜನ |
ಸುಲಭನಜಹರಿಗಳ್ಗೆ ದುರ್ಲಭನು ಬಗೆಗೆ ಮಂ |
ಗಳವಾಗಿ ರಂಜಿಸಿದನಿಂತು ಪಂಚಬ್ರಹ್ಮದಿರವಿನಿಂ ಸರ್ವೇಶನು | ||೧೬||

ನೋಡಿ ಸದ್ಗುರುಶಾಂತಮಲ್ಲಿಕಾರ್ಜುನನ ನೊಡ |
ಗೂಡಿ ಮನದೊಳ್ನಮಸ್ಕರಿಸಿ ಪುಳಕಾಂಕುರಂ |
ಮೂಡುತಿರೆ ಕಂಗಳಿಂದೋಡುತಿರೆ ದಳದಳನೆ ಹರ್ಷಾಶ್ರುವಾರಿಪೂರಂ ||
ಬೇಡದೇನುಮನೆಯ್ದೆ ನಿಬ್ಬೆರಗುವಡೆದು ಕೊಂ |
ಡಾಡುತಿರ್ದ್ದಂ ರೇವಣೇಶ್ವರಂ ದೇವಕುಲ |
ಚೂಡಾಮಣಿಯ ತ್ರಿಲೋಕೈಕರಕ್ಷಾಮಣಿಯ ಮನ್ನಿಸುವುದೆನ್ನನೆಂದು ||೧೭||

ಕಳೆದುದೇಳ್ನೂರುವತ್ಸರವೀನಿರುದ್ಧ ಕಿಳೆ |
ಗಳಿದು ಶಾಂಭವಲೋಕದಿಂದೆ ನೀನಿನ್ನು ಮು |
ನ್ನಳವಟ್ಟ ಸಿಹ್ಮವಾಹನ ವಷ್ಟಶಿಖೆ ಮಹಾಸಿದ್ಧಿ ಮಿರುಗುವ ಕರ್ಪರಂ ||
ಬಲಮುರಿಯು ವಜ್ರಮಣಿ ಕೀಲಿಸಿದ ಕನಕಕುಂ |
ಡಲವಾದಿಯಾದುವೊಡವೆರಸಿ ಯತಿರಾಜತೆಯ |
ಬಲಮಂ ಪ್ರಕಾಶಿಸೆಂದುಸಿರ್ದನಣುಗಂಗೆ ಸದ್ಗುರು ಶಾಂತಮಲ್ಲೇಶನು ||೧೭||

ಬಳಸು ಸತತಂ ಗೃಹಸ್ಥೋಕ್ತಧರ್ಮವನು ಮಂ |
ಗಳವಾಡಪಟ್ಟಣದೊಳಂಗವಂಗ ಕಳಿಂಗ |
ಮಲಯಾಳಚೋಳ ಬಿಜ್ಜಳಪಾಂಡ್ಯ ಪಾರಿಯಾತ್ರಕರೆಂಬ ರಾಯರಲ್ಲಿ ||
ಎಳವೆಣ್ಗಳಂ ತಂದು ಪರಿಣಯಸಪಾಗಿ ನಿ |
ರ್ಮಳಶೈವಸಿದ್ಧಾಂತಮಂ ಪ್ರಕಟಿಪುತ್ತೆ ಗುರು |
ಕುಲತಿಲಕನೆನಿಸಿ ಸಂಪದಕಧಿಕನಾಗೆಂದನೀಶನಾಸಿದ್ಧೇಂದ್ರನಂ ||೧೮||

ಸದಮಳಮೆನಲ್ಕಿಂತು ತೋರಿ ನಿಜರೂಪ ಲಿಂ |
ಗದೊಳು ನೆಲಸಲ್ ಪೂಜಿಸುತೆ ಭಕ್ತಿಯಿಂ ಕೈಮು |
ಗಿದು ಹಸಾದವೆನುತ್ತೆ ಕೈಕೊಂಡು ಕಲ್ಪತರು ಸುರುಧೇನು ಚಿಂತಾಮಣಿ ||
ಒದಗಿ ಬೆಸಸಿತನೆಸಗೆ ಶಿವನೊರೆದ ಸರ್ವಸಂ |
ಪದಮೊಪ್ಪೆ ಸಂದಣಿಸಿ ಭುವನದೊಳ್ ಖ್ಯಾತಿಯ |
ಭ್ಯುದಯಮಾಗಲು ರೇವಣೇಶನಾ ಪರ್ವತದ ತಾರಾಚಲದೊಳಿರ್ದನು ||೧೯||

ಪಲಕಾಲಮಿಂತಿದ್ದು ಪರ್ವತಾಶ್ರಮದೊಳ |
ಗ್ಗಲಿಸಿ ಯತಿರಾಜತೇಜಮ ನಿಳಾವಳಯದೊಳು |
ಬಳಿಕ ಕಾಶೀಕ್ಷೇತ್ರಕೆಳ್ತಂದು ಜಾಹ್ನವಿಯ ನುರುಸಿದ್ಧಲಿಂಗಂಗಳಂ ||
ಅಳಿದ ಮಾತ್ರದೊಳೀಶ್ವರಾಕಾರಮಂ ತಾಳ್ದ |
ಖಿಳ ಜೀವರಾಶಿಯಂ ನೋಡಿ ಪರಿಣಾಮಿಸುತೆ |
ಕೆಲವುದಿನಮಿರ್ದಂ ಪರಬ್ರಹ್ಮಮೂರ್ತಿಯಾ ರೇವಣಾಸಿದ್ಧೇಶನು ||೨೦||

ಪರಮಶಿವಯೋಗಿ ಪಟ್ಟಾಭಿರಾಮನ ದುರಿತ |
ಹರನ ಸದ್ಗುರುಬಾಲ ಸಿದ್ಧೇಶ್ವರನ ಮಹಾ |
ಕರುಣಾವಲೋಕನದ ಬಲದಿನಾಂ ಪೇಳ್ದ ಸಿದ್ಧೇಶ್ವರ ಪುರಾಣದೊಳಗೆ ||

ಹರನನುಗ ಶರಧಿಯೇಳರ ಮಧ್ಯದಲ್ಲಿ ಸಂ |
ಚರಿಸಿ ಪರ್ವತಶಿಖರದಾಶ್ರಮದೊಳಿದ್ದರ್ದ ಬಂ |
ದುರುತರೋತ್ಸವದಿ ಕಾಶೀಕ್ಷೇತ್ರದಲ್ಲಿದ್ದರ್ದ ಕಥೆಯಿದೇಳನೆಯಸಂಧಿ ||೨೧||

## ಏಳನೆಯ ಸಂಧಿ ಮುಗಿದುದು.

ಶ್ರೀ ಶಂಕರಾಯನಮಃ.

## ( ಎಂಟನೆಯ ಸಂಧಿಯು. )



ಸೂ|| ದುರುಳಖರ್ಪರನನೋಡಿಸಿ ಮಾಯಿದೇವಿಯ ಕು |
ವರಿಸಹಿತ ಸಕಲಕನ್ಯಾಬಂಧನವ ಬಿಡಿಸಿ |
ಪರಮಗುರುವೀರಬಿಜ್ಜಳನಣುಗಿಯಂ ಮದುವೆಯಾಗಿಸುಖದಿಂದಿದ್ದರ್ನು||

ಸ್ವರ್ಗಾಪವರ್ಗ ಸೌಖ್ಯಪ್ರದ ಮಹೇಶ ಶಿವ |
ಭರ್ಗ ಭವ ಭೀಮ ಭಾಳಾಕ್ಷ ಭುಜಗಾಭರಣ |
ಗಾರ್ಗ್ಯಗೌತಮಪುಲಸ್ತ್ಯಮರೀಚಿಮುಖ್ಯಮುನಿವರ್ಗಸೇವಿತಪದಾಬ್ಜ ||
ಅರ್ಗಮಸದಳವೆನಿಪ ಮಹಿಮಾಬ್ಧಿ ಸಜ್ಜನಾಂ |
ತರ್ಗತಪರಂಜ್ಯೋತಿ ಪರತತ್ತ್ವಮೂರ್ತಿ ಜಯ |
ನಿರ್ಗ್ಗುಣಿನೀನಮಿತ ಶಾಂತಮಲ್ಲೇಶ್ವರಾ ದುರ್ಗಾಮನೋವಲ್ಲಭಾ ||೧||

ಗುರುವರೇಣ್ಯನು ಕಾಶಿಯೊಳು ಸುಖದೊಳಿರಲಿತ್ತ |
ಗರುವೆ ಮಾಯ್ದೇವಿ ಮಂಗಳವಾಡಪಟ್ಟಣದೊ |
ಳುರುತರಖ್ಯಾತಿಯಂ ಪಡೆದನ್ನ ಸತ್ರವರವಟಿಗೆ ಕೂಪಂ ತಟಾಕಂ ||
ಹರಭವನ ವಖಿಲಶಿವಶರಣಸತ್ಕಾರಮಂ |
ವಿರಚಿಸಿ ವಿಲಾಸದಿಂದಿರುತೊರ್ಪ ಕುವರಿಯುವ |
ತರಿಸೆ ನಿಜಗರ್ಭದಿಂ ರೇವಣಾಸಿದ್ಧರಸಿ ಯೆಂದೆಂಬ ಪೆಸರಿಟ್ಟಳು ||೨||

ನಳನಳಿಸಿ ಕಲ್ಪಲತೆ ಕುಡಿವರಿವ ಮಾಳ್ಕೆಯಿಂ |
ಬಳೆದೊಂದೆರಡ್ಮೂರುನಾಲ್ಕೈದುವರ್ಷವಾ |
ಗಲು ತನೂಜೆಯನೋದಲಿಟ್ಟು ನೃತ್ಯವ ಕಲಿಸಿ ಸಂಗೀತಕಳೆಯ ಒರಿಸಿ ||

ಇಳೆಗಿದತಿಪೊಸತೆನೆ ಗುರೂತ್ತಮನ ಪೆಸರ ಕೋ |
ಮಲೆಗೆ ನಾನಾವಿದ್ಯೆ ತನ್ನ ಸೊಮ್ಮಾಗೆ ವೆ |
ಗ್ಗಳಿಪ ಸಂತೋಷದಿಂ ಮಾಯ್ದೇವಿ ಶಿವಭಜನೆಯಂ ಮಾಡುತೊಪ್ಪಿರ್ದ್ದಳು ||೩||

ನುಣ್ಣಪ್ಪು ನಿರಿಗುರುಳ ತತಿಗೆ ಸಂಜಲತೆ ಕಡೆ |
ಗಣ್ಗೆ ನಳಿತೋಳ್ಗೆ ಮಿಗೆ ಹೊಗರು ನಡುವಿಂಗಸಿದು |
ಗೋಣ್ಗೆಸೆವ ರೇಖೆ ಮೊಳೆಮೊಲೆ ಯುಂದವಾದುರಕೆ ತೆಳ್ಗದಂಪಿಂಗೆ ಕಾಂತಿ ||
ಜಾಣ್ಗೆ ನಯನುಡಿ ಯೆಡಂಗುಡೆ ಸುಗುಣಸಂಪನ್ನೆ |
ಪೆಣ್ಗಳನ್ವಯರತ್ನದನ್ನೆ ರೇವಣದೇವಿ |
ತಣ್ಗಂಪುಬಾವನ್ನದಂತೆ ತನುವಿಂಗೆಸೆಯೆ ಸಿಂಗರಕೆ ನೆಲೆಯಾದಳು ||೪||

ಭಾವಸಂಭವನ ಬಳಸದ ಬಯಕೆ ರತಿದೇವಿ |
ಯೋವುವರಸಂಚೆ ಸನ್ಮೋಹನಮಹಾಮಂತ್ರ |
ದೇವತೆ ವಸಂತಕನ ಮರಿಯಾನೆ ವಿಟರ ಪುಣ್ಯದ ಬೆಳಸು ಜವ್ವನಿಗರ ||
ದೇವಮಣಿ ಭೋಗಿಗಳ ಸೌಭಾಗ್ಯಲಕ್ಷ್ಮಿಯೆಂ |
ದಾವಗಂ ಪೆಸರ್ವಡೆದು ಚೆಲ್ವಿನಿಂದೊಪ್ಪಿದಳು |
ರೇವಣಾಸಿದ್ಧರಸಿ ಲಾವಣ್ಯರಸಸರಸಿ ಚತುರಕನ್ಯಕೆಯರರಸಿ ||೫||

ಸ್ಮರನ ಶರವಿಮ್ಮಡಿಸಿದಂತೆ ದಶವರ್ಷದೆಳ |
ವರೆಯ ಸಮನಿಸಲು ರೇವಣದೇವಿಯುಂ ಕಂಡು |
ನೆರೆ ಹೆಚ್ಚಿ ಹಿಗ್ಗಿ ಮರೆಯದೆ ಗುರೂತ್ತಮನ ಪಾದಾರವಿಂದವ ನೆನೆವುತೆ ||
ಇರಲಾ ಪುರಾಧಿಪಂ ವೀರಬಿಜ್ಜಳನರೇ |
ಶ್ವರನೋಲಗದೊಳಿರ್ದ್ದು ಮಾಸನೂರಿನ ನದಿಯ |
ಸುರಗಿಯಧಿಕಪ್ರಸಂಗವ ಕೇಳಿ ತನಗೆ ಕೈಸಾರಬೇಕೆಂದೆಣಿಸಿದಂ ||೬||

ಆವಬಗೆಯಿಂದಾದೊಡೀ ಕಠಾರಿಯ ತೆಗೆಸಿ |
ಭೂವಳಯದೊಳ್ ಖ್ಯಾತಿಯಪ್ಪಂತೆ ಪಿಡಿವೆನೆಂ |
ದಾವೀರಬಿಜ್ಜಳನರಾಧಿಪಂ ಜೆಂಬೊನ್ನರಾಶಿಯಂ ತಣಿವಂತಿರೆ ||
ಈವೆನೀಮಾಸನೂರಿನ ನದಿಯೊಳತುಳಪ್ರ |
ಭಾವದಿಂ ಸೊಗಯಿಸುವ ಕೈದುವನುಪಾಯದಿಂ |
ದಾವವಂ ತೆಗೆದೀವನಾತಂಗೆನುತೆ ಡಂಗುರಂಬೊಯ್ಸಿ ಸಾರಿಸಿದನು ||೭||

ಅದಕೆ ಮಾರುತ್ತರಂಗುಡದಖಿಳಮಂತ್ರತಂ |
ತ್ರದೊಳು ಕುಶಲರು ದಿವ್ಯಯಂತ್ರಜ್ಞರುಂ ಬಿಡಲು |
ಬೆದ ರಾಯನ ಚಿತ್ತಮಮಂ ಪಡೆವ ಬಗೆಯೆಂತೆನುತ್ತನಿಬರಾಲೋಚಿಸಿ ||
ವಿದಿತವೆಣ್ದೆಸೆಗೆ ಪೊನ್ನುಡುಗೊರೆಯನಿತ್ತು ಕಳು |
ಹಿದರೆ ಚರರಿಳೆಯೊಳಗೆ ಘುರವಟಿಸಿ ಕಂಡುರುಹ |
ಲೊದವಿ ಕೊಂಕಣದೇಶದಿಂದೆ ಖರ್ಪರನೆಂಬ ಕಲಿಜೋಗಿ ನಡೆತಂದನು ||೮||

ಬರುತಿರ್ದ್ದನಾಜೋಗಿ ಪೆರ್ಬುಲಿಯನಡರಿ ಭೀ |
ಕರಭೂತವೇತಾಳನಿಕರ ಸೇವಿಸುತಿರ್ದ್ದ |
ವರಕುಟಿಲವಿದ್ಯೆಯೊಳ್ಧೀರರೆರ್ೈನೂರುಯೋಗಿಣಿಯರೊಡನೆಳ್ತರೆ ||
ಶರಖಡ್ಗ ಸಲಿಲವಹ್ನಿಸ್ತಂಭ ರಸಸಿದ್ಧಿ |
ಯುರುರಸಾಯನಸಿದ್ಧಿಯುಳ್ಳ ಕಾಪಾಲಿಕರ |
ನೆರವಿ ಯಿಕ್ಕೆಲದೊಳೋಲೈಸಿ ಬರೆ ವೀರಬಿಜ್ಜಳನೃಪಾಲಕನ ಸಭೆಗೆ ||೯||

ಇದಿರ್ವಂದು ಕೈಗೊಟ್ಟು ಸಿಹ್ಮಾಸನದೊಳಿರಿಸಿ |
ಮೃದುವಚನದಿಂದೆ ಮನ್ನಿಸಿ ಯುಳುಪಿ ಬೀಡಾರ |
ಮೊದಲಾದುವಂ ಕೊಟ್ಟು ಧನಕನಕವಸ್ತುವಾಹನವಿತ್ತು ಪರಿಮಿತದೊಳು ||
ಕದನಜಯುಕಾಂತೆ ಯೆನಗೊಲಿವಂತೆ ತೆಗೆದುಕುಡು |
ವುಮು ಮಾಸನೂರ ಮಡುವಿನ ಕಠಾರಿಯನೆಂದು |
ಪವೆಸಿಂದೆ ಪೇಳ್ದನಾ ಕುಟಿಲವಿದ್ಯಾನಿಧಿಗೆ ವೀರಬಿಜ್ಜಳಭೂಪನು ||೧೦||

ದ್ವಾದಶಸಹಸ್ರಕನ್ಯಕೆಯರುಂ ಬಲಿಗೊಟ್ಟ |
ರಾದಪುದು ಈಮಹಾಸುರಗಿಯೆಂದರಸನೊಡ |
ನಾದರವಿ ನುಡಿಯಲಾ ಖರ್ಪರನ ನುಡಿಗೇಳ್ದು ವೀರಬಿಜ್ಜಳಭೂಪನು ||
ರೋದನಂಗೆಯ್ಯೆ ತಾಯ್ತಂದೆನಂಟರ ತಂಡ |
ವೇದಿನಿಗೆಚೆಲ್ವಿನೆಳವೆಣ್ಗಳಂ ಪಿಡಿದುಕೊಂ |
ಡುಯ್ದು ಸೆರೆಯಿಟ್ಟನಾವಾಸದೊಳು ಧರ್ಮಕಳ್ಕದ ದುರುಳ ಪಾಪಾತ್ಮನು ||೧೧||

ಎಳವೆಣ್ಗಳಂ ನೆರಪಿ ಕಾಪಾಲಿಕನ ಕುಹಕ |
ಕೊಳಗಾಗಿ ಪನ್ನೆರಳ್ಸಾಸಿರದ ಗಣನೆಗೊ |
ರ್ತಳೆ ಕೊರತೆಯಾಗಲಾ ನೃಪತಿ ಚರರ್ಗಂ ಕಳುಹಿ ದೇವಣಾರಾಸಿದ್ಧರಸಿಯುಂ ||

ಎಳೆದುಯ್ಯೆ ಮಾಯ್ದೇವಿ ಕಣ್ಬನಿಯ ಸೈಗರೆದು |
ತಳವೆಳಗುಗೊಂಡು ಬೆಂಬೀಳ್ದು ಮೊರೆಯಿಟ್ಟಳಳ |
ವಳಿದೆನ್ನ ಸುತೆಯ ತಂದಿತ್ತು ಪಾಲಿಸು ರೇವಣಾಸಿದ್ಧಗುರುವೆ ಯೆಂದು ||೧೨||

ಸುಯ್ಯುರಿಯಸುಗುಳೆ ಶಿವಘೋಎಂದು ಬಾಯ್ವಿಟ್ಟ |
ಕಯ್ಯೆತ್ತಿ ಕಣ್ಬನಿಯ ಹೊನಲೊಳಾಳುತ್ತೆ ಮುಳುಗು |
ತಯ್ಯೋ ಮಹಾದೇವ ಶಾಂತಮಲ್ಲೇಶ್ವರಾಕಾರ ದುರಿತಾಪಹಾರಾ ||
ರಯ್ಯಮಾಗಿರ್ದ್ದ ಶಿವತತ್ತ್ವಾಧಿಪತಿ ರೇವ |
ಣಯ್ಯ ಸಲಹೆಂದು ಮಾಯ್ದೇವಿ ಮೊರೆಯಿಟ್ಟೊಡಾ |
ಹುಯ್ಯಲಂ ಕೇಳಿದನು ವಾರಾಣಸಿಯೊಳಿರ್ದ್ದ ಸಕಲಸಿದ್ಧಿಗಳಾಣ್ಮನು ||೧೩||

ನೆನೆವ ಭಕ್ತರ ಮನವೆ ಮನೆಯಾಗಿ ಬಾಳ್ವ ಪೆಂ |
ಪಿನ ನೋಂಪಿಗಾಣ್ಮನಾ ರೇವಣಾಸಿದ್ಧೇಶ್ವ |
ರನು ಬಂದು ಕಾಶಿಯಿಂ ಮಾಯ್ದೇವಿಯಿದಿರೊಳೆಡೆವಡೆದು ಕಣ್ಬನಿಯ ತೊಡೆದು ||
ತನುಜೆಯನು ತಂದೀವೆನಂಜದಿರೆನುತ್ತಭಯ |
ವನು ಕೊಟ್ಟು ರೇವಣಾಸಿದ್ಧರಸಿಯಿಂದೆ ಬಂ |
ಧನಮೋಕ್ಷವಾಗಲಿ ಸಮಸ್ತಕನ್ಯಾವಿತತಿಗೆಂದರಸನೆಡೆಗೆ ನಡೆದಂ ||೧೪||

ದೂರದಿಂದಂ ಕಂಡು ಶಿವಸಿದ್ಧನೆಂದರಿದು |
ವೀರಬಿಜ್ಜಳನು ಸಿಹ್ಮಾಸನಮನಿಳಿದಳ್ಕಿ |
ಧಾರಿಣಿಯ ಮೇಲೊಡಲ ಸಾರ್ಚಿ ಯಭಿನಮಿಸಿ ಹೊಂಗದ್ದುಗೆಯೊಳಿಂಬುಗೊಳಿಸಿ ||
ಸೌರಭೋದಕದಿನಡಿದಾವರೆಯ ತೊಳೆದು ವಿ |
ಸ್ತಾರಭಕ್ತಿಯೊಳು ಮಸ್ತಕದಲ್ಲಿ ಧರಿಸಿ ಯೆಲೆ |
ಕಾರುಣ್ಯನಿಧಿಯೆ ಬೆಸನಾವುದೆನಗೆಂದು ವಿನಯದಿ ನುಡಿದು ಕೈಮುಗಿದನು ||೧೫||

ಡುರುಳಖರ್ಪರನೆಂಬ ಜೋಗಿಯಾಡಿದ ಮಾತು |
ನಿರುತವೆಂದೆಳೆಯೊಳಗೆ ಪೆಣ್ಗೊಲೆಗೆ ಹೇಸದರ |
ವರಿಸದೀರಾರುಸಾಸಿರಕನ್ನಿಕೆಯರ ತರಿಸಿದೆ ಪಾಪ ಸಂಭವಿಸಿತು ||
ಅರಸ ನಿನಗಂತದಂ ಪರಿಹರಿಪೆವೆಂದೆಮಗೆ |
ಬರವು ಸಮನಿಸಿತು ಬಿಡುಬಿಡು ಬಂಧನದೊಳಿರ್ದ್ದ |
ತರುಣಿಯರನನಿಬರನೆನುತ್ತೆ ಬೆಸಸಿದನು ಶಿವಸಿದ್ಧಕುಲಮಣಿದೀಪನು ||೧೬||

ಗುರುನಿರೂಪವ ಕೇಳಿದಾಕ್ಷಣವೆ ಬಿಟ್ಟು ತ |
ತ್ತರುಣೀಸಮೂಹಮಂ ರೇವಣಾಸಿದ್ಧರಸಿ |
ವೆರಸಿ ನಿಜನಿಜಗೃಹಂಗಳಿಗಾ ನೃಪಾಲಕಂ ಕಳುಹಿ ಸಿದ್ಧಾಧೀಶನ ||
ಚರಣಕಾನತನಾಗಿ ಮಾಸನೂರಿನ ನದಿಯ |
ಸುರಗಿಯುಂ ತೆಗೆವುದೊಲಿದಾಂ ಧುಸವೇಳ್ಪುದೆಂ |
ದೊರೆಯಲಂತಾಗಲಿದು ಗಹನವೇ ಎಂದನಾನನದೊಳೆಳನಗೆ ನೆಗಳಲು ||೧೭||

ನಡೆ ಮಾಸನೂರ್ಗೆಲೆನೃಪಾಲ ತಡವಿಲ್ಲದೆನೆ |
ಪೊಡವಿಯೊಡೆಯಂ ಪಟ್ಟದಾನೆಯಗ್ರದೊಳಿರಿಸಿ |
ಮೃಡಮೂರ್ತಿರೇವಣಾಸಿದ್ಧನಂ ಪೊರಮಡಲು ಭೇರಿನಿಸ್ಸಾಳಕಹಳೆ ||
ಬಿಡದುಲಿದುವೆಣ್ದೆಕ್ಕುಘುಮ್ಮಿಡಲು ಕುದುರೆ ತೇ |
ರ್ಪಡೆ ಸೊಕ್ಕಿದಾನೆಯಿಂದಿಳೆಕುಸಿಯೆ ತೆರಳಿದಂ |
ಪೊಡವಿಯಾಣ್ಮಂ ಜಡಿಯೆ ಧ್ವಜಪತಾಕೆಗಳು ಕೆಂದೂಳು ನಭಕುಪ್ಪರಿಸಲು ||೧೮||

ಉರಿಯಿದಿರೊಳಿರದೆ ಪಾರಿದ ಪಾದರಸದಂತೆ |
ದುರುಳಳಿದು ಖರ್ಪರಂ ಜಾರಿದಂ ಕೊಂಕಣದ |
ಸರಣಿವಿಡಿದಾಪಥದೊಳಿತ್ತಲಾ ವೀರಬಿಜ್ಜಳನು ಸಿದ್ಧೇಂದ್ರಸಹಿತಂ ||
ತ್ವರಿತದಿಂದಂ ಬಂದು ಮಾಸನೂರಿನ ನದಿಯ |
ಪೊರೆಗೈದಿ ನೋಡಲಾ ಸುರಗಿ ಮುಂಗಾರೊಳುರೆ |
ಮೊರೆವ ಬರಸಿಡಿಲಂತೆ ಘುಡುಘುಡಿಸುತಿರ್ದುದೀಕ್ಷಿಪರೆಲ್ಲ ಬೆರಗಾಗಲು ||೧೯||

ಮಡುವಿನೊಳುನೀರಮೇಲಡಿಯಿಟ್ಟು ಗುರುರಾಯ |
ನಡೆದೆಯ್ದಿ ಹರುಗೋಲಮೇಲೆ ನೃಪತಿಯನಿರಿಸಿ |
ಘುಡುಘುಡಿಪ ದಿವ್ಯಾಯುಧದ ಪೊರೆಗೆ ಬಂದಲಗನುಗಿದು ಪಿಡಿಯೆಂದುತೋರೆ ||
ಪಡೆಯಯ್ದನುಳ್ಳ ಪಾವಾಗಿ ಭುಸ್ಸೆನಲದಂ |
ಪಿಡಿವೊಡರಸಂ ಬೆದರಿ ಪಿರಿದು ಗರಳಜ್ವಾಲೆ |
ಸುಡುತಿದೆ ಕೃಪಾಳುವೇ ಮುನ್ನಿರ್ದ್ದ ನೆಲೆಯೊಳಿರಿಸಾ ಕಠಾರಿಯನೆಂದನು ||೨೦||

ಸಂತೈಸಿ ವೀರಬಿಜ್ಜಳನೃಪನ ನರಮನೆಗೆ |
ಮುಂತೆ ಬೀಳ್ಕೊಟ್ಟು ಸೈನ್ಯಂ ಕಾಣದಂತಿರೇ |
ಕಾಂತದೊಳು ಕರುಣದಿಂ ಸಿದ್ಧೇಶ್ವರಂ ಸೊಂಕಲಾ ಸುರಗಿ ಮಾಯವಾಗೆ ||

ಕಾಂತಿ ತಿಂತಿಣಿಸ ತನುವಿಂ ಯಕ್ಷರೂಪದಿಂ |
ದಂ ತೋರ್ಕೆಗೊಳಗಾಗಿ ಶರಣೆಂದು ಬೀಳ್ಕೊಂಡು |
ಕಾಂತೆಯೊಡಗೂಡಿತು ವಿಶಾಪ ಸಮನಿಸಿ ಯಕ್ಷಲೋಕಮಂಸಾರ್ದು ನಲಿದು ||೨೧||

ಬಕುತಿಯಿಂದಂ ಪಿಂದೆ ಮುಂದೆ ಕೆಲನೊಳು ಸೈನ್ಯ |
ನಿಕರವೋಲೈಸಲಾ ವೀರಬಿಜ್ಜಳ ನೃಪಾ |
ಲಕನರಮನೆಯ ಪೊಕ್ಕು ದೇವಾನ್ನದಾರೋಗಣೆಯ ಮಾಡಿ ಸಿದ್ಧೇಂದ್ರನು ||
ಪ್ರಕಟಿತ ಕೃಪಾದೃಷ್ಟಿಯಿಂ ನೋಡೆ ದಿವ್ಯರ |
ತ್ನಕದಂಬವಮಳ ಜಾಂಬೂನದಂ ಪೊಸತಾಗಿ |
ಸಕಲ ಗೃಹವೀಧಿಯೊಳ್ತೀವಿರಲು ಸೋಜಿಗಂಬಟ್ಟನಾ ನೆಲನಾಣ್ಮನು ||೨೨||

ಮುನ್ನೇಂ ಮಹಾಸುಕೃತಮಂ ನೆಗಳಿದೆನೊನಾಂ ಪ್ರ |
ಸನ್ನಮುಖಕಮಳ ಸಿದ್ಧೇಶ ನತಪರಿತೋಷ |
ನಿನ್ನಂಘ್ರಿಸೇವೆಯಂ ಮಾಳ್ಪ ಸೌಭಾಗ್ಯ ದೊರಕೊಂಡುದಿನ್ನೆನ್ನೇಳ್ಗೆಗೆ ||
ಜನ್ನವೀರಯ್ಯತ್ತ ನೊಡರಿಚಿದ ದೇವೇಂದ್ರ |
ನುನ್ನೋಡೆ ಪರಿವಾರನೆಂದು ಕೊಂಡಾಡಿದನು |
ಮನ್ನೆಯರು ಮಂಡಲೇಶ್ವರರು ದುರ್ಗಾಧಿಪತಿಗಳುಸಹಿತ ಬಿಜ್ಜಳೇಂದ್ರಂ ||೨೩||

ಪೋದಪ್ಪೆವಿನ್ನು ದೇಶಾಂತರಂ ಮಾಳ್ಪೆವೆಂ |
ದಾ ದಯಾಂಬುಧಿ ಸಿದ್ಧಪತಿ ನಿರೂಪಿಸೆ ಕೇಳಿ |
ಪಾದಮಂ ಕಟ್ಟಿಕೊಂಡರಸ ನೆನ್ನಾತ್ಮಜೆ ಸುಲಕ್ಷಣೆಯ ಮದುವೆಯಾಗಿ ||
ಮಾದೇವನಣುಗ ಕೇಳೆನಗೊಡೆಯನಾಗಿ ಚೆ |
ಲ್ವಾದೀ ಸಮಗ್ರ ಸಂಪದಕಧಿಪನಾಗಿ ಸಂ |
ಪಾದಿಪುದು ಕೃಪೆಯನೆನೆ ಪಾಲಿಸಿದನಾ ಬಿನ್ನಪವನು ಶಿವಯೋಗೀಂದ್ರನು ||೨೪||

ಗುರುರೇವಣೇಶ್ವರನೊಡಂಬಡಲು ಮೇದಿನೀ |
ವರ ವೀರಬಿಜ್ಜಳಂ ಪಿರಿದಾಗಿ ಪರಿಣಮಿಸಿ |
ಪರಿಣಯನಮಂಟಪವ ನೆಸೆವಂತಲಂಕರಿಸಿ ಶುಭಕರ ಮುಹೂರ್ತದಲ್ಲಿ ||
ತರುಣೀಶಿಖಾಮಣಿಯ ಲಕ್ಷಣಾದೇವಿಯಂ |
ಧರೆ ಪೊಗಳೆ ಕಲ್ಯಾಣವಂ ಮಾಡಿಕೊಟ್ಟು ಕರಿ |
ತುರಗರಥಸೇನೆಯಂ ಬಳುವಳಿಯನಿತ್ತು ನಮಿಸಿದನಾ ಮಹಾಮಹಿಮಗೆ ||೨೫||

ತನ್ನ ರಾಜಾವಾಸದಿಂದೆ ಮಿಾಟಾದ ಪೊಸ |
ಪೊನ್ನ ಕರುವಾಡಂಗಳಿಂ ಸೌಧಸಂಚಯವ |
ಚೆನ್ನರನ್ನಂ ಕೆತ್ತಿಸಿದ ಮಿಸುನಿಗಳಸಕೀಲಿಸಿದಧಿಕಹರ್ಮ್ಯಂಗಳಂ ||
ಉನ್ನತವಿಲಾಸದಿಂ ಮಾಡಿಸಿ ಸುಲಕ್ಷಣೆಯು |
ಮನ್ನೀಲಲೋಹಿತನ ಸುತನ ಮನೆದುಂಬಿಸಿದ |
ನಿನ್ನಬಾರಣೆಯೆನುತೆ ಪೊರೆಯೇರೆ ಚಿತ್ತದೊಳು ವೀರಬಿಜ್ಜಳರಾಯನು ||೨೬||

ಆವಕಡೆ ನಡೆದೊಡಂ ರಿಪುನೃಪರ ಜಯಿಸಿ ನಾ |
ನಾವಿಧೈಶ್ವರ್ಯಕ್ಕೆ ಕರ್ತನಾಗೆಂದಖಿಳ |
ಶೈವದೀಕ್ಷಾಚಾರ್ಯ ನತ್ಯಧಿಕಗಾಂಭೀರ್ಯ ರೇವಣಾಸಿದ್ಧೇಶನು ||
ಭೂವರನ ಪರಸಿ ವಾಂಛಿತಸಿದ್ಧಿಯಂ ಸಲಪಿ |
ಪಾವನಾತ್ಮಕ ಶಾಂತಮಲ್ಲಿಕಾರ್ಜುನನ ಮಿಗೆ |
ಭಾವಪೂಜೆಯನೊಡರ್ಚುತೆ ರಾಜಿಸಿದನು ಮಂಗಳವಾಡಪಟ್ಟಣದೊಳು ||೨೭||

ಚಾಳುಕ್ಯ ಚಕ್ರೇಶ್ವರಾನ್ವಯದ ಧಾರಿಣೀ |
ಪಾಲಕನ ವೀರಬಿಜ್ಜಳನ ಪುತ್ರಿಯೊಳು ಸ |
ಲ್ಲೀಲೆಯೊಳಗಪ್ರತಿಮ ಸಾಮ್ರಾಜ್ಯಸೌಖ್ಯಾನುಭವ ವಿಭವಸಹಿತನಾಗಿ ||
ನೀಲಲೋಹಿತ ಶಾಂತಮಲ್ಲಿಕಾರ್ಜುನಮೂರ್ತಿ |
ಯಾಲೋಕನಕ್ರಿಯಾಪ್ರೌಢಿಯಂ ಚಿತ್ತದೊ |
ಳ್ಮೇಳೈಸಿ ಸಂತತಂ ಶಿವಸಿದ್ಧಯೋಗಿರಾಯ ನಜೇಯ ನೊಪ್ಪಿರ್ದ್ದನು ||೨೮||

ಶಿವಯೋಗಿ ಬಾಲೇಶ್ವರನ ನೇಮದಿಂ ಮಹೋ |
ತ್ಸವದೊಳಾಂ ಪೇಳ್ದ ಸಿದ್ಧೇಶ್ವರ ಪುರಾಣದೊಳು |
ಶವೆ ಖರ್ಪರನ ಜಯಿಸಿ ಕನ್ನಿಕೆಯರಂ ಬಿಡಿಸಿ ಯಕ್ಷನೆಡರಂ ಪಿಂಗಿಸಿ ||
ಅವನೀಶ್ವರಂ ವೀರಬಿಜ್ಜಳನೃಪಾಲಕನ |
ಕುವರಿಯಂ ಪರಿಣಯನವಾಗಿ ಸುಖರಾಜ್ಯದೈ |
ಭವದಿ ಮಂಗಳವಾಡದೊಳು ಸಿದ್ಧಪತಿಯಿರ್ದ್ದ ಕಥೆಯಿದೆಂಟನೆಯಸಂಧಿ ||೨೯||

## ಎಂಟನೆಯಸಂಧಿ ಮುಗಿದುದು.



ಶ್ರೀ ಸಾಂಬಾಯನಮಃ.

## (೯ ನೆಯ ಸಂಧಿಯು.)

ಸೂ|| ರಾಜೇಂದ್ರಚೋಳ ಮೊದಲಾದ ಭೂಪಾಲಕತ |
ನೂಜೆಯರು ಮುಸ್ನೂರ್ವರಂ ಮದುವೆಯಾಗಿ ಯತಿ |
ರಾಜರಾಜಂ ರುದ್ರಮುನಿದೇವರೆಂಬ ಕುವರನ ಪಡೆದು ಸುಖಮಿರ್ದ್ದನು||

ಧೂರ್ಜಟಿ ವಿರೂಪಾಕ್ಷ ನೀಲಲೋಹಿತ ಶರ |
ತ್ಪರ್ಜನ್ಯನಿಭಗಾತ್ರ ಚಂಡಕರಶತಕೋಟಿ |
ನಿರ್ಜಿತಮಹಾತೇಜ ರಾಜಶೇಖರ ರಾಜರಾಜಸಖವಿಂಶತಿಮುಖ ||
ಅರ್ಜುನಮನೋರಥಫಲಪ್ರದಾಯಕ ರುದ್ರ |
ವಾರ್ಜೋದರಾಕ್ಷಿಪೂಜಿತಪಾದಪದ್ಮ ಲಸ |
ದೂರ್ಜಿತೈಶ್ವರ್ಯ ಜಯಜಯ ಶಾಂತಮಲ್ಲಿಕಾರ್ಜುನ ಶಿವ ಕೃಪಾಂತರಂಗ ||೧||

ಗುರುನಾಥನಿಂತು ಮಂಗಳವಾಡಪಟ್ಟಣದೊ |
ಳಿರಲಿತ್ತ ಚೋಳದೇಶಮನಾಳುತಿರ್ಪ್ಪ ನುರು |
ತರಪರಾಕ್ರಮಿ ಲಿಂಗಜಂಗಮಾರ್ಚಕನು ದೇಶಿಕಪದಾಂಬುಜಭೃಂಗನು ||
ವರಕೀರ್ತ್ತಿಕಾಮಿನೀಕಾಂತ ನತ್ಯಂತವಿ |
ಸ್ತರದಯಾಪರನು ಧಾರ್ಮಿಕಶಿಖಾಮಣಿ ದಿವಾ |
ಕರವಂಶದೀಪಕನು ಚೋಳಭೂಪಾಲನಹಿತಕ್ಷಿತಿಪಕುಲಪಾಲನು ||೨||

ಓರೊಮ್ಮೆ ಯಮರಾವತಿಗೆ ಪೋಗಿ ಪಾಂಡ್ಯನುಂ |
ಚೇರಮಂಸಹಿತವಾ ಚೋಳಭೂಪತಿ ವಿಷ್ಟ |
ರಾರೂಢರಾಗಿ ಸುರಪತಿಗೆ ನಮಿಸದೆ ಸಾಮ್ಯತೇಜದಿಂದಿರೆ ಕೆರಳ್ದು ||
ಆರಾಜವಲ್ಲಭನ ಬೀಳ್ಕೊಡುತೆ ಕೆಲದಿನ ವ |
ಪಾರಸನ್ಮಾನದಿಂ ಬಳಿಕೊಮ್ಮೆ ಬರವೇಳ್ದು |
ಧಾರಿಣಿಗೆ ಮಾತಲಿಯ ಕಳುಹೆ ತಂಜಾಪುರಿಗೆ ಬಂದು ನೃಪನಂ ಕಂಡನು ||೩||

ಅವನನು ಪಚರಿಸಿ ಯುಡುಗೊರೆಯಿತ್ತು ತೆರಳೆ ಗಗ |
ನವನಡರ್ವ ವಾಯುವಿನ ವಹಿಲಮಂ ಮಿಗೆ ಪರಾ |
ಭವಿಪ ತೇಜಿಯನೇರಿ ಚೇರಪಾಂಡ್ಯರ್ವೆರಸಿ ಸಂಭ್ರಮದೊಳೈತರುತಿರೆ ||

ದಿವಿಜೇಂದ್ರನಾತನೆಳ್ತರ್ಪ ಬಾಗಿಲ ಮೇಲೆ |
ಜವಳಿವಾವುಗೆಯನಿಂಬಿಟ್ಟಿರಿಸೆ ಕಂಡು ತುರ |
ಗವನು ಮಡದಿಂದೊತ್ತಿ ದಾಂಟಿಸಿದನಾ ಮಹಾದ್ವಾರವನು ಚೋಳನೃಪನು ||೪||

ಕರೆದು ಕೈವಿಡಿದಡರ್ದ ಸಿಹ್ಮಾಸನದಮೇಗೆ |
ಬರಸೆಳೆದು ಕುಳ್ಳಿರಿಸಿ ಮನುಜರಾಗ್ರಿರ್ದ್ದವರು |
ಧರಿಸಬಾರದ ತೋರಹಾರಮಂ ಕೊರಲೊಳಿಡೆ ತನಗೆ ಮೂವಡಿಯೆನಿಸುವ ||
ಸಿರಿಯೇಳ್ಗೆಯಿಂದೊಪ್ಪೆ ನಡೆ ನೋಡಿ ಮೂಗಿನೊ |
ಳ್ಬೆರಲನಿಟ್ಟೊಲೆದೊಲೆದು ಮಸ್ತಕವನಾ ಪುರಂ |
ದರನು ತನ್ನಂತರಂಗದೊಳಿರ್ದ್ದ ಕುಟಿಲತೆಯ ಬಿತ್ತರಿಸಿ ಕನ್ನಡಿಸಿದಂ ||೫||

ಭಾಳನೇತ್ರಂಗಲ್ಲದಭಿನಮಿಸೆವರ್ಧೇಂದು |
ಮೌಳಿಯುಂಡುಳುಹಿದನ್ನಮನಲ್ಲದುಣ್ಣೆವಾ |
ನೀಲಲೋಹಿತನ ಬೀಳುಡೆಯನಲ್ಲದೆ ಪೊದೆಯೆ ವೆಮಗೀಗಳೆಳಮುತ್ತಿನ ||
ಮಾಲೆಯಂ ತಳೆವುದಿದು ಚೋದ್ಯಮೇ ಎಂದು ಭೂ |
ಪಾಲಜಾಲಕಿರೀಟಶಿಖರಮಾಣಿಕ್ಯನಾ |
ಚೋಳಭೂಪತಿಯರಿಪಲೊಡನೆ ಶತಮನ್ಯು ವಿನಯದಿ ಬಳಿಕ್ಕಿಂತೆಂದನು ||೬||

ಸುರರೊಳಿಂದ್ರತ್ವಮೆನಗಲ್ಲದಿಳೆಯೊಳಗೆ ಕೇ |
ಳ್ಧರಣಿಪರೊಳಿಂದ್ರತ್ವ ನಿನಗಲ್ಲದೊಪ್ಪದೆಲೆ |
ನಿರುತವಿದು ಮೊದಲು ರಾಜೇಂದ್ರಚೋಳನೆನಿಪ್ಪ ಪೆಸರು ನಿನಗಾಗಲೆಂದು ||
ಪರಸಿ ಧನಕನಕವಾಹನವಸ್ತುಗಳನಿತ್ತು |
ಮರಳಿ ಬೀಳ್ಕೊಟ್ಟನಲ್ಲಿಂದೆ ಬಂದಾಚಾರ್ಯ |
ವರನನೀಶ್ವರನ-ನರ್ಚಿಸುತತುಳಬಳನಾಗಿ ರಾಜ್ಯವಾಳುತ್ತಿರ್ದ್ದನು ||೭||

ಆನೃಪನ ರಾಣಿ ಕುಲಶೇಖರೀದೇವಿ ವಿ |
ಜ್ಞಾನಸಂಪನ್ನೆ ಕಡುಚೆನ್ನೆ ಸೌಭಾಗ್ಯದೊಳ |
ಸೂನೆ ಪಾಲ್ಗಡಲಣುಗಿಯಂತಪ್ಪ ಕುವರಿಯಂ ಬಯಸಿ ಮಂಗಳೆಯಾಣ್ಮನ ||
ಆನಂದದಿಂ ಭಜಿಸೆ ವರವಿಯ್ಯೆ ಪಡೆದು ಸ |
ನ್ಮಾನಿನಿಯ ಗಂಗಾಭವಾನಿಯಂತಪ್ಪ ಪು |
ಣ್ಯಾನುಗತಚರಿತೆಯಂ ಪುತ್ರಿಯಂ ಸೌಂದರಿಯೆನಿಪ್ಪ ಪೆಸರಿಂ ಕರೆದಳು ||೮||

ಕಳಿದು ಶೈಶವಮನಾ ಸುಕುಮಾರಿ ಜವ್ವನಂ |
ದಳೆದು ಸೌಂದರ್ಯಸ್ವರೂಪಲಕ್ಷಣಗುಣಾ |
ವಳಿಗಳೊಳ್ತನಗೆ ಸಮವಿಲ್ಲೆನಿಸಿ ವಿಖ್ಯಾತಿಯಂ ಪಡೆದು ಭುವನದೊಳಗೆ ||
ಲಲನಾಕದಂಬಕದ ಸೀಮಂತಮಣಿಯೆಂಬ |
ವೊಲು ವಿರಾಜಿಸುತಿರ್ದ್ದಳಾ ಕುವರಿಯವಯವದ |
ಚೆಲುವಿಕೆಯ ಪೊಗಳುವೊಡೆ ಜಿಹ್ವೆಯಿಚ್ಛಾಸಿರದ ಶೇಷಂಗೆ ಯಳವಡುವುದೆ ||೯||

ಶ್ರುತಿಗಳೊಳು ಸಾಮವೇದಂ ಪರಮಶಕ್ತಿಸಂ |
ತತಿಗಳೊಳು ಚಿಚ್ಛಕ್ತಿ ಶಾಸ್ತ್ರಂಗಳೊಳು ಜಗ |
ನ್ನುತವೀರಶೈವಶಾಸ್ತ್ರಂ ದಿವ್ಯಮಂತ್ರಸಂದೋಹದೊಳು ಪಂಚಾಕ್ಷರಿ ||
ಅತಿಶಯಂ ಮಿಗಿಲಾಗಿ ಪೆಸರ್ವಡೆದವೊಲು ರಾಜ |
ಸುತೆಯರೊಳು ಮಿಾಟೆನಿಸಿದಳು ಭಾಸ್ಕರಾನ್ವಯೋ |
ನ್ನತನ ವಿಕ್ರಮಚೋಳಸುತನ ರಾಜೇಂದ್ರಚೋಳನ ಕುಮಾರಿತಿ ಸೌಂದರಿ ||೧೦||

ಈಪರಿಯಲೊಪ್ಪುತಿಹ ರಾಜೇಂದ್ರಚೋಳಧರ |
ಣೀಪತಿಯ ತನುಜೆ ಸೌಂದರಿದೇವಿಯತುಳಗೌ |
ರೀಪತಿಯ ಪಿರಿಯೊಡೆಯನ್ನೈನಾರೆನಿಪ ಮಹಾಶಿವಲಿಂಗಮಂ ಭಜಿಸುತೆ ||
ತಾಪಸೋತ್ತಮರ ನಾರಾಧಿಸುತನಾರತಂ |
ಸ್ವೈಪನಭಿವರ್ಧಿಸುತ್ತಿರಲಂದು ನಡೆತಂದ |
ನಾಪುರಿಗೆ ಸುರಗುರು ವೆಲರ್ವಟ್ಟೆಯಿಂದಿಳಿದು ತನುಕಾಂತಿ ಗೊಂದಣಿಸಲು ||೧೧||

ಧರಣಿಪತಿ ಕಂಡು ಗಗನದಿನಿಳಿದುಬಂದ ಸುರ |
ಗುರುವ ನಿದಿರ್ಗೊಂಡು ಕೈಗೊಟ್ಟು ಹರಿವಿಷ್ಟರದೊ |
ಳಿರಿಸಿ ಯರ್ಘಾರ್ಘ್ಯಾದಿಸತ್ಕಾರಮಂ ಮಾಡಿ ಬಿಜಯಂಗೆಯ್ದ ಕಜ್ಜವೇನು ||
ಒರೆಯಿಮೆನೆ ಮುನ್ನ ನಿನ್ನಣುಗಿ ಸೌಂದರಿ ಮಹೇ |
ಶ್ವರನಪರರೂಪ ನೆನಿಸುವ ರೇವಣಪ್ರಭುವಿ |
ನರಸಿ ಯೆಂದುಸಿರ್ದುದ ವೃತ್ತಾಂತವೆಲ್ಲವನರಿಪಿ ನಿಜನಿವಾಸಕ್ಕೆಯ್ದಿದಂ ||೧೨||

ಆಂಗಿರನ ನುಡಿಗೇಳಿ ಮಗಳೆಂಬ ಮೋಹ ಪೆರ |
ಪಿಂಗೆ ಸಾಕ್ಷಾತ್ಪರಮಶಕ್ತಿಯೆಂದರಿದಂತ |
ರಂಗದೊಳ್ಮುದದಿನಂತಃಪುರಕೆ ಬಂದು ಸುರಗುರು ತನಗೆ ಪೇಳ್ದ ಹದನಂ ||

ಅಂಗಿಕೆಗೆ ಕುಲಶೇಖರೀದೇವಿಗೊರೆದು ಶಿವ |
ಲಿಂಗೋದ್ಭವಂಗೆ ತಳುವದೆ ಸೌಂದರಿಯ ವಿವಾ |
ಹಂಗೆಯ್ವೆನೆಂದೆಣಿಸಿ ರಾಜೇಂದ್ರಚೋಳಭೂಪಾಲನುದ್ಯೋಗಿಸಿದನು ||೧೩||

ಕರೆಸಿ ಮಯಮಾಂಡವ್ಯ ವಿಶ್ವಕರ್ಮಾದಿಗಳ |
ದೊರೆಯೆನಿಪ ಶಿಲ್ಪಶಾಸ್ತ್ರಜ್ಞರಂ ಲೇಸಾಗಿ |
ಪರಿಣಯನ ಮಂಟಪವ ಮಾಡಿಸಿ ಸುವರ್ಣದಿಂ ರನ್ನದಿಂ ಬಿನ್ನಣದೊಳು ||
ಬರಿಸಿ ಸಚಿವಾಗ್ರಗಣ್ಯರ ಬಿನ್ನವತ್ತಲೆಯ |
ಬರೆಸಿ ಬಿಜಯಂಗೆಯ್ವುದೆಂದು ಯತಿರೂಪಶಂ |
ಕರನೆನಿಪ ರೇವಣೇಶ್ವರನೆಡೆಗೆ ಕಳುಹಿದನು ಮನುಕುಲಸಮುದ್ಧರಣನು ||೧೪||

ಅವರ ಮಂಗಳವಾಡಪಟ್ಟಣಕೆ ಬಂದು ವೈ |
ಶ್ರವಣನರಮನೆಯಂದಮಂ ಸೋಲಿಸುವ ವೈಭ |
ವವನುಳ್ಳ ರೇವಣಾರಾಧ್ಯರಾಸ್ಥಾನಮಂ ಪೊಕ್ಕು ಸಾಷ್ಟಾಂಗದಿಂದೆ ||
ತವೆ ನಮಿಸಿ ಬಿನ್ನವತ್ತಲೆಯನಿತ್ತು ಚಿತವಾ |
ಗ್ವ್ಯವಹಾರಮಂ ರಚಿಸಿ ಯೆಮ್ಮಾಳ್ದನಂ ಪವಿ |
ತ್ರವ ಮಾಡಲೋಸುಗಂ ಬಿಜಯಮಾಡಲ್ವೇಳ್ಕುಮೆಂದಂಜಲಿಯ ಮುಗಿದರು ||೧೫||

ಕರುಣದಿಂದವರ ಮನ್ನಿಸಿ ವೀರಬಿಜ್ಜಳನ |
ಕರೆಸಿ ರಾಜೇಂದ್ರಚೋಳನ ಪುರಿಗೆ ಪೋದಪೆವು |
ಪರಿಣಯನಕಾರಣವೆನುತ್ತೆ ನಕೆರಿಯೊಳಿರಿಸಿ ರೇವಣಾಸಿದ್ಧೇಂದ್ರನು ||
ತೆರಳಬೇಕೆಂದು ಸೇನಾಪತಿಗೆ ಬೆಸಸೆ ಜೆ |
ಚ್ಚರದೊಳಾ ವೇಳೆಯೊಳು ಪ್ರಸ್ಥಾನಭೇರಿಗಳು |
ಮೊರೆದುವು ಧಣಂಧಣಂಧಣ ಯೆಂಬ ಘನನಿನದ ಪರ್ಬ್ಬಿ ಯುಬ್ಬ ಮಾಗಲು ||೧೬||

ನೆರೆದುದಾ ವೇಳೆಯೊಳ್ ಪಟುಭಟನಿಕಾಯ ಮದ |
ಕರಿಘಟಾಕೋಟಿ ರಥರಾಜಿ ವಾಜಿಪ್ರತತಿ |
ಯೆರಡನೆಯ ಪರಮೇಶ್ವರನು ರೇವಣಾಸಿದ್ಧಗುರು ತೆರಳಿ ಬರುತಿರ್ದ್ದನು ||
ಕಿರಣವನ್ಮಣಿಖಚಿತಕನಕದಾಂದೋಳಮನ |
ಡರಿ ಮೌಕ್ತಿಕಚ್ಛತ್ರ ವೆಡಬಲದೊಳೆಸೆಯೆ ಬಿಂ[illegible] |
ಧುರವೃಷಭಕೇತನಂ ವ್ಯಾಸಹಸ್ತಂ ಪಡೆಯ ಮುಂಗುಡಿಯೊಳೆತ್ತಿ ಬರಲು ||೧೭||

ಇದೆಬಂದಪಂ ವೀರಶೈವದೀಕ್ಷಾಚಾರ್ಯ |
ನಿದೆಬಂದಪಂ ದುಷ್ಟವಾದಿಶಿಕ್ಷಾಚಾರ್ಯ |
ನಿದೆಬಂದಪಂ ಪರಂಜ್ಯೋತಿಮೋಕ್ಷಾಚಾರ್ಯ ರೇವಣಾಸಿದ್ಧೇಶನು ||
ಮದನನಂ ಗೆಲ್ದು ಕಾಲನ ನಿವಾರಿಸಿ ಯಗ್ರ |
ಪದವಿಯಂ ಶಾಂತಮಲ್ಲೇಶನಿಂಪಡೆದ ನಿ |
ರ್ಮದನು ನಿರ್ಮ್ಮಯನಿದೆಬಂದಪನೆನುತ್ತೆ ದನಿದೋರಿದವು ಕಹಳಾವಳಿ ||೧೮||

ಶಿವಸಮಯಕಧಿಕವಿಲ್ಲೆಂದು ಡಂಗುರವ ಪೊ |
ಯ್ವವೊಲಿದಿರಿನೊಳ್ಪೊಡೆವ ಬಹುಳಜಯಘಂಟೆಗಳ |
ರವವೆಂಟುದಿಕ್ಕಿನೊಳ್ತೀವೆ ಸೈನ್ಯದ ಚರಣಹತಿಯಿಂದೆ ನೆಗೆದ ಧೂಳಿ ||
ರವಿರಥವ ಮುಸುಕೆ ಬಾಂಬಟ್ಟೆಯೊಳ್ ಸಂಚಲಿಪ |
ದಿವಿಜಕಾಂತೆಯರ ಸೋರ್ಮುಡಿಗೆ ಕಾಶ್ಮೀರರೇ |
ಣುವ ತಳಿದವೋಲಿರಲು ನಡೆತಂದನಪ್ರತಿಮರೇವಣಾಸಿದ್ಧೇಶನು ||೧೯||

ತೊಲಗಿ ಮಾಯಾವಾದಿಕರ್ಮವಾದಿಗಳಿರದೆ |
ತೊಲಗಿ ವಾಗದ್ವೈತಿಗಳು ಶೂನ್ಯವಾದಿಗಳು |
ತೊಲಗಿ ಬಾಹ್ಯರೆನಿಸುವ ಬೌದ್ಧರಾರುಹತದವರು ಮುಂಗಡೆ ನಿಲ್ಲದೆ ||
ತೊಲಗಿ ಮೀಮಾಂಸಕರು ಪಾಂಚರಾತ್ರಿಕರು ಗುರು |
ಕುಲಭಾನು ಶುದ್ಧವಿದ್ಯಾರತ್ನಸಾನು ನಿ |
ರ್ಮಳಚಿತ್ತಶರಣಸುರಧೇನು ಬಂದಪನೆಂದು ಕಹಳೆಯೊದರುತ್ತಿರ್ದುವು ||೨೦||

ಕ್ಷುದ್ರಮತಸಿದ್ಧಕೋಲಾಹಲನು ನಿಖಿಲಗುಣ |
ಭದ್ರನಂತೇವಾಸಿಸುವರ ಸಂಸಾರದೋ |
ಷದ್ರವನಿವಾರಣನು ಭವಘನಸಮೀರಣನು ಪರಮತತ್ತ್ವಾಭರಣನು ||
ಚಿದ್ರೂಪನಾದಿಮಧ್ಯಾಂತರಹಿತಂಜ್ಞಾನ |
ಮುದ್ರಾವಿಚಕ್ಷಣನು ಭಜಕಜನದುರಿತಭಯ |
ಕಾದ್ರವೇಯೌಘಗಾರುಡಮಂತ್ರಸಿದ್ಧನಾ ಸಿದ್ಧಗುರು ಬರುತಿರ್ದನು ||೨೧||

ರೇವಣಾಸಿದ್ಧೇಶ್ವರಂತೆರಳಿಬರ್ಪ ವಾ |
ರ್ತಾವಿಶೇಷವನು ಚರರಿಂದರಿದು ನಲಿದು ತಂ |
ಜಾವರಮಹಾಪಟ್ಟಣದೊಳು ಗುಡಿತೋರಣಂಗಳನು ಪೊಸತೆನೆ ಕಟ್ಟಿಸಿ ||

ವೈವಸ್ವತಾನ್ವಯೋದ್ಭವ ನಕ್ಷಯಾನಂದ |
ವಾವರಿಸೆ ಹೃದಯಮಂ ಸಡಗರಿಸುತಿರ್ದ್ದನಮ |
ರಾವತಿಯ ಸಿರಿಯ ಭೋಗಾವತಿಯ ಸಂಪದವ ಪಳಿಯೆ ತದ್ರಾಜಧಾನಿ ||೨೨||

ದೇವದುಂದುಭಿ ಮೊಳಗೆ ಪಾರಿಜಾತೋದ್ಗಮಮ |
ಪಾವೃಷ್ಟಿ ಕರೆಯೆ ಸರನಿಕರವೋಲೈಸಲೈ |
ರಾವತಮಹಾಗಜದಮೇಗೆ ನಭದಿಂದಿಳಿದು ಬಂದರಂತಾಪೊಳಲ್ಗೆ ||
ದೇವೇಂದ್ರನಗ್ನಿಯಮನೈಋತಿಸಮುದ್ರೇಶ |
ಪಾವಕಪ್ರಿಯಕುಬೇರೈಶಾನರೊಡಗೂಡಿ |
ಶೈವದೀಕ್ಷಾಚಾರ್ಯರೇವಣ ಪ್ರಭುವರನ ಕಾಣಲೆಂದಾಪಥದೊಳು ||೨೩||

ಅವನಿಪತಿ ರಾಜೇಂದ್ರಚೋಳನುಪಚರಿಸಿ ವಾ |
ಸವನ ನಾವೇಳೆಯೊಳು ಬಂದತುಳಮಗಧಮಾ |
ಳವಕುಂತಳಾಂಧ್ರಮುಖ್ಯಕ್ಷಿತೀಶ್ವರರ ಸತ್ಕರಿಸಿ ಯಂತವರುಸಹಿತ ||
ಶಿವಯೋಗಿರಾಯನಂ ರೇವಣಾರಾಧ್ಯನಂ |
ವಿವಿಧಸೌರಂಭದಿಂದಿದಿರ್ಗೊಂಬೆನೆಂದು ಬಲ |
ನಿವಹವೊಡವೆರಸಿ ನಡೆದನು ಮಂಗಳಾನಕಪ್ರತತಿ ಭೋರೆಂದುಲಿಯಲು ||೨೪||

ಮೃಡಮೂರ್ತಿ ರೇವಣಾಸಿದ್ಧಪತಿ ಪಲ್ಲಕಿಯ |
ನಡರಿ ಥಾಳಿಸೆ ಧವಳಚಾಮರಂ ಮುತ್ತುಗೊಡೆ |
ಪಿಡಿದುಬರೆ ಮನ್ನಣೆಯ ಶಿಷ್ಯವರ್ಗಂ ಬಲನೊಳೆಡನೊಳೋಲೈಸಿಬರಲು ||
ಪಡೆಗಡಲು ಘೋಷಿಸುತ್ತಿರಲು ಕಂಚುಕಿಗಳು |
ಗ್ಗಡಿಸೆ ಬರ್ಪ್ಪುದನು ದೂರದೊಳೆ ಕಂಡಾಚೋಳ |
ಪೊಡವಿಯಾಣ್ಮಂ ಸುರೇಂದ್ರಂಸಹಿತ ಮೆಯ್ಯಿಕ್ಕಿ ವಂದಿಸುತೆ ನಡೆತಂದನು ||೨೫||

ಬಂದು ವಂದಿಸಿದೊಡಾ ಚೋಳಭೂಪತಿಯಂ ಪು |
ರಂದರನ ನಖಿಳದೇಶಾಧಿಪಾಲಕರ ಸಲೆ |
ಗೊಂದಣವ ನನುನಯೋಕ್ತಿಯಲಿ ಮನ್ನಿಸಿ ಬರುತ್ತಿರ್ದ್ದನಾ ಗುರುನಾಥನು ||
ಮುಂದೆ ರಂಭಾದಿಗಳ ನರ್ತನಂ ಗಾಂಧರ್ವ |
ವೃಂದಗಾನಂ ದೇವದುಂದುಭಿನಿನಾದಂಗ |
ಳೊಂದಿ ರಂಜಿಸೆ ಪರಮಹರ್ಷದಿಂ ತಂಜಾವರಾಹ್ವಯಮಹಾನಗರಿಗೆ ||೨೬||

ಮನುಮುನಿಗಳಮರರುಗಳಾದಿಯಾಗಿರ್ದ್ದವರ |
ಮನದೊಳಗೆ ಬೆಳಗುವ ಪರಂಜ್ಯೋತಿರಾಕಾರ |
ನೆನಿಪ ಪೂರ್ವಾಚಾರ್ಯರೇವಣೇಶಂಗಾರತಿಗಳ ಬೆಳಗುತ್ತಿರ್ದ್ದರು ||
ವನಿತೆಯರು ಜಾಂಗುಭಲರೇಜಾಂಗುಬಲರೇ ಎಂ |
ದೆನಂತೆ ಮಾಗಧರು ಕೊಂಡಾಡೆ ಜಯುಜಯುಎಂಬ |
ನಿನದ ಸುರನಿಕರದಿಂ ನೆಗೆಯೆ ಕನ್ನಡಿಕಲಸದೆಳವೆಣ್ಗಳೊಂದು ಗೂಡಿ ||೨೭||

ಪರಿಣಯನಮಂಟಪದ ಮುಂದೆ ಪಲ್ಲಕಿಯನಿಳಿ |
ದುರುತರೋತ್ಸವದೆ ಕೈಗೊಟ್ಟುಬರುತಿರೆ ಪುರಂ |
ದರನು ದೇಶಾಧಿಪರು ಕೆಲದೊಳುಗ್ಗಡಿಸೆ ಪಾಯವಧಾನವೆನುತಲಂದು ||
ಪರಮಗುರು ನಡೆತಂದನಡಿಯೊಳೆಡೆವಡೆದ ಕೆಂ |
ಬರಲ ಪೆಂಡೆಯದ ನುಣ್ಗದಿರ್ಗಳಾ ಸ್ಥಳದಲ್ಲಿ |
ಪರೆದು ಕೆಂದಾವರೆಯರಲ್ಗಳಂ ಪರಪಿದೊಂದಂದದಿಂ ಬಗೆಗೊಳಿಸಲು ||೨೮||

ಮೊದಲೆ ಕಯ್ಗೆಯ್ದಿರ್ದ್ದ ಭದ್ರಮಂಟಪದ ಮ |
ಧ್ಯದ ರತ್ನಸಿಂಹಾಸನದಮೇಲೆ ಕುಳ್ಳಿರಿಸಿ |
ಸದಮಳಸುವರ್ಣಪಾತ್ರೋದಕದಿನಡಿದೊಳೆದು ಬಳಿಕುತ್ತಮಾಂಗದಲ್ಲಿ ||
ವಿದಿತಭಯಭಕ್ತಿಮಿಗಲಾ ಪಾದತೀರ್ಥಮಂ |
ಮುದದಿಂದೆ ಧರಿಸಿ ರಾಜೇಂದ್ರಚೋಳನು ವಿಜಿತ |
ಮದನಾತಿಶೌರ್ಯನಂ ರೇವಣಾಚಾರ್ಯನಂ ನೋಡಿ ಪುಳಕಿತನಾದನು ||೨೯||

ಸುರಗುರು ಮುಹೂರ್ತವತಿಹತ್ತಿರಾದುದೆನುತ್ತೆ |
ಧರಣಿಪತಿರಾಜೇಂದ್ರಚೋಳಂಗೆ ಪೇಳೆ ಸಖಿ |
ಯರ ಕರೆಸಿ ಸೌಂದರೀದೇವಿಯನಲಂಕರಿಸಿಯೆಂದು ಬೆಸಸಿದೊಡಾಕ್ಷಣಂ ||
ಪರಿಮಳಿಪ ಕುಂಕುಮದ ತಿಗುರಿಟ್ಟ ಮಾಂಗಲ್ಯ |
ವಿರಚನೆಗಳಂ ಮಜ್ಜನಂಬುಗಿಸಿ ಬಳಿಕ ಶೃಂ |
ಗರಿಸೆ ನವವಸ್ತ್ರಭೂಷಣದಿನತಿವಿಭವದಿಂ ಪೆಣ್ಮಣಿ ಬೆಡಂಗಾದಳು ||೩೦||

ಪಸುಳೆತನದೊಳ್ ನಮಸ್ಕರಿಸುವಿಳೆ ಯೆನಗೆ ಕಳೆ |
ಪಸರಿಸಿದ ಬಳಿಕ ವಂದಿಸದಿಪಕ್ಕೆಂತೆಂದೆ |
ಣಿಸಿ ಧರಾಜನವಂದನೀಯರಾಜೇಂದ್ರಚೋಳನ ಕುವರಿ ತತ್ಕಾಂತೆಯ ||

ಮಿಸುಪ ನಗೆಮೊಗವಪ್ಪೆನೆಂದು ಸಂಭವಿಸಿತೋ |
ಶಶಿಬಿಂಬವೆಂಬತಿರೊಪ್ಪಿದುದು ಲಾವಣ್ಯ|
ರಸ ತುಂಬಿ ತುಳ್ಳಾಡೆಸೌಂದರಿಯ ವದನಮುಜ್ಜ್ವಲವಜ್ರಸಾಮ್ಯರದನಂ ||೩೧||
ಮಿರುಗುವೆಳಜೊನ್ನವಕ್ಕಿಯ ನೈದಿಲೊಳ್ಳೆಸಳ |
ಮರಿಮಿಗದ ಖಂಜರೀಟದ ಸೊಗಸಿನೇಳ್ಗೆಯಂ |
ಜರೆದು ಸಿದ್ಧೇಶನೊಲವೆಂಬ ಹರಿಚಂದನದ ಕುಸುಮಸೌರಭಕೆರಗುವ ||
ಮರಿದುಂಬಿಗೇಂ ಮೂಡಿತೋ ಬಿಳಿಯಗರಿಯೆನಿ |
ಪ್ಪೆರಕ ಪೊರಪೊಣ್ಮುತಿರೆ ರಾಜೇಂದ್ರಚೋಳನೆಲ |
ದೆರೆಯನ ಕುಮಾರಿತಿಯ ನಿಡಿಗಣ್ಮಲರ್ಗ್ಗಳೊಪ್ಪಿದುವಮಮ ತಳತಳಿಸುತೆ ||೩೨||
ಪಿಡಿದು ಸಂಮೋಹನಮಹಾಶಕ್ತಿಯಾಡುವು |
ಗ್ಗಡದಿಂದ್ರನೀಲಮಣಿಮಯದ ಕಂತುಕವೊ ಕ |
ರ್ಪಡರ್ದಿರುಳತಿರುಳಿನೊಬ್ಬುಳಿಯೋ ತಮಾಲಭೂಜದ ಪಚ್ಚಪಸಿಯ ತಳಿರ ||
ತೊಡಬೆಯೋ ತಾನೆಂಬವೋಲೊಪ್ಪೆತೆರಡನೆಯ |
ಮೃಡನ ನಲ್ಮೆಯ ರಮಣಿಯೆನಿಪ ಸೌಂದರಿಯ ಸೋ
*ರ್ಮುಡಿ ಸೋಗೆನವಿಲನೂರ್ಮಡಿ ಸೊಬಗನೊಳಕೊಂಡುಪಡಿಯಿದಕದಾವುದೆನಲು||೩೪||
ಸುರಕುಜದ ಲಲಿತವರಶಾಖೆಗಳೊ ಸುರಗಜದ |
ಬರಿಕಯ್ಯೊ ನೂತನಶಿರೀಷದಾಮವೊ ಭಾವಿ |
ಪರ ಬಗೆಗೆನಿಪ್ಪಮಾತಂತಿರಲಿ ರೇವಣಾಸಿದ್ಧೇಶ್ವರನ ಸೊಂಕಿನ ||
ಪರಮಸುಖ ತನಗೆ ಸಮನಿಸಬೇಹುದೆಂದು ಭಾ |
ಸುರಕನಕಲತೆ ಮೇರುವಿಂದೆ ಬಂದಿಲ್ಲಿ ಯವ |
ತರಿಸಿತೋ ಪೇಳೆನೆ ವಿರಾಜಿಸಿತು ಸೌಂದರಿಯ ನುಣ್ಪಡರ್ದ ನಳಿತೋಳ್ಗಳು ||೩೫||
ರತಿಯುಂ ಮನೋಜನುಂ ಪೂಜಿಸುವ ಕಾಂತಿಯುತ |
ವಿತತಸ್ವಯಂಭುಲಿಂಗಂಗಳೋ ಮುಂದೀಯು |
ವತಿಯ ಹೃದಯಂ ರೇವಣಪ್ರಭುವರಂಗೆ ನೆಲೆವನೆಯಪ್ಪುದೆಂದು ತಿಳಿದು ||
ಚುತುರಾಸ್ಯನದರಮೇಗಿಂಬಿಟ್ಟ ವರ್ತುಳೋ |
ನ್ನತಶಾತಕುಂಭಕುಂಭಂಗಳೋಏನೆ ಮಹೀ |
ಪತಿತಿಲಕರಾಜೇಂದ್ರಚೋಳನಣುಗಿಯ ಬಟ್ಟಮೊಲೆಗಳಂದಂಬಡೆದುವು ||೩೬||

ಟಿ॥ * ರ್ಮುಡಿಸೊಬಗನೊಳಕೊಂಡು ಕಡುಚೆಲ್ವನಾಂತಿನ್ನು ಪಡಿಯಿದಕ್ಕಾವುದೆನಲು ||

ಬಿಸಜಗರ್ಭಂ ರೂಪು ರೇಖೆ ತಪ್ಪದೆ ಎನಿ |
ಸ್ಮಿಸುತತಿಪ್ರೌಢಿಯಿಂ ಪಸಿಯೆಪದದಲ್ಲಿ ಸೊಗ |
ಯಿಸೆ ಮುಷ್ಟಿಯಿಂದೆ ಪಿಡಿದೆಡೆಯೆನಿಪ ಸಂದೇಹ ವೀಕ್ಷಿಪರ ಮಾನಸವನು ||
ಮುಸುಕೆ ಸೌಂದರಿಯಸಿಯ ನಡು ನಾಡೆಯುಂ ವಿರಾ |
ಜಿಸುತಿರ್ದ್ದುದುಟ್ಟ ದೇವಾಂಗದುಡೆನೂಲು ಕೀ |
ಲಿಸಿದ ಮಣಿಗಣದೆಸೆವ ಕುಸುರಿವೆಳಗಿಡಿದು ಚಿತ್ರಿಸಿದಂತಿರೊಪ್ಪುತಿರಲು ||೩೬||

ತ್ರಿವಳಿತೆರೆ ನಾಭಿಯಾವರ್ತ ನುಣ್ಬಾಸೆ ಮಿಸು |
ಗುವ ಕಪ್ಪುವಡೆದ ಶೈವಲರೇಖೆ ವೃತ್ತಸ್ತ |
ನವೆ ರಥಾಂಗಂ ಮುದ್ದುವೊಗವಬ್ಜಲಾವಣ್ಯರಸ ವಮಳಸಲಿಲವಾಗೆ ||
ಯುವತಿಸೌಂದರಿಯ ತೆಳ್ಕೊಡಲು ಪೂಗೊಳನೆನಿ |
ಪ್ಪವೊಲೊಪ್ಪುತಿರ್ದ್ದುದಾ ರೇವಣಪ್ರಭುಪರಮ |
ಶಿವಯೋಗಿರಾಜಹಂಸಂಗೆ ಕೇಳೀಸ್ಥಲಂ ತಥ್ಯಮೆನಿಪಂದದಿಂದೆ ||೩೭||

ನೊಸಲ ಮಾಣಿಕದ ಬೊಟ್ಟಿನ ಕೆಂಗದಿರ್ನೆಗೆದು |
ಪಸಿನೆ ಬೈತಲೆಯಲ್ಲಿ ಸಿಂಧೂರರೇಖೆಯೋ ||
ಲ್ಮಿಸುಗೆ ನಗೆಗಣ್ಗೊನೆಯ ಬೆಳ್ವೆಳಗು ಪರ್ವಿ ಪರಕಲಿಸಿ ವೃತ್ತಾಕಾರದಿಂ ||
ಎಸೆದಪುದೆನಲು ಪೊಳೆವ ಪೊಸಮುತ್ತಿನೋಲೆ ಶೋ |
ಭಿಸೆ ಮಿಸುನಿವೆಟ್ಟಿನೆಣೆಗೋಡಿನೊಳ್ಪರಿದ ದಿವಿ |
ಜಸರಿತ್ಪ್ರವಾಹವೆನೆ ಬಜ್ಜರದ ಪದಕ ರಂಜಿಸಲೊಪ್ಪಿದಳ್ ಸೌಂದರಿ ||೩೮||

ಕಾರಮುಗಿಲೊಳ್ಪೊಳೆವ ತಾರಕಾನಿಕರದವೊ |
ಲೋರಣದಿನೆಸೆಯ ತುರುಬಿಸಮೇಲೆ ಸೇರಿಸಿದ |
ಕೋರಮುತ್ತಿನ ಸೂಸಕಂ ಪೊನೆಯ ನನೆಗಣೆಗೆ ಪಂಚರತ್ನಮನರ್ಚಿಪ ||
ಚಾರುಚಾಮೀಕರದ ಕಟ್ಟೆಟ್ಟ ಪಾಂಗಿದೆನೆ |
ರಾರಾಜಿಸಲ್ತೀವಿದುಂಗುರಂಗಳು ಜೋಳ |
ಧೂರಮಣನಾತ್ಮಭವೆ ರಂಜಿಸಿದಳೆಯ್ದೆ ಶೃಂಗಾರರಸಪೂರಮಾಗಿ ||೩೯||

ಕೆಳದಿಯರಲಂಕರಿಸಿ ಸೌಂದರಿಯ ನಿಂತು ಪಂ |
ಗಳಮಯವೆನಲ್ಕಂದು ರಾಜೇಂದ್ರಚೋಳನಂ |
ಥಳದ ಮೇಗಿರಿಸಿ ಘೂಕ್ಕುಷಳಿಯ್ಸನು ಧವಳಮಂ ಶೋಭನದ ರಾಗಂಗಳಂ ||

ಲಲನೆಯರು ಸಾಲ್ವಿಡಿದು ಪಾಡಿ ಪೆಂದಿದಿರೊಳೆಡ |
ಬಲನೊಳೋಲೈಸಿ ಬರೆವರೆ ವಿಲಾಸಿನಿಯರ |
ಗ್ಗಳಿಸಿದಾಟೋಪದಿಂ ಪರಿಣಯನಮಂಟಪಕೆ ಪರಿತೋಷದಿಂ ತಂದನು ||೬೦||

ನಡೆಮಡಿಯ ಹಾಸಿದಂತಿರೆ ನೂಪುರದೆ ೞಳೆಡಂ |
ಬಡೆದ ಮುಕ್ತಾಫಳಂಗಳ ಕಾಂತಿ ಯಾವರಿಸಿ |
ಯಡಿಗಡಿಗೆ ಕುಂಕುಮರಸವ ಸೂಸಿದಂತಿರಲು ಪದತಳದ್ಯುತಿ ಪೊದಳ್ದು ||
ನಡೆವೆಡೆಯೊಳೊಲೆವ ನಳಿತೋಳ ಮೇಗಳ ಪಚ್ಚೆ |
ಡೊಡವಿನೆಳವೆಳಗುಣ್ಮಿ ದೂರ್ವಾಂಕುರವನು ಸಾ |
ಲ್ವಿಡಿದಂತಿರಲ್ಕೆಸೆವ ಸಖಿಯರೆಳ್ತಂದರೋಲೈಸಿಯಾ ಸೌಂದರಿಯನು ||೬೧||

ತೊಳಗುವಾಮಳಕದಂದದ ಕಣಗಿಲೆಲೆಯತೋ |
ಳ್ಪಳೆಯ ಕಂಕಣಸೂಡಗಂಗಳ ಕರಂ ಮಸಂ |
ಗೊಳಿಪ ಮಾಣಿಕದ ಚೌಕದ ಬೊಟ್ಟುಗಳ ಮಡದಮೇಗಿಳಿದ ಸುಣ್ಣಿಡೆಗಳ ||
ಘಲಘಲಿಸುವಂಮುಗೆಯ ಪಾಯುವಟ್ಟದ ಬಟ್ಟೆ |
ಮೊಲೆಯ ಮೇಲೆಳಲಿಟ್ಟ ಮುತ್ತಿನೇಕಾವಳಿಯ |
ಚೆಲುವೆಯರು ಬಂದರೋಲೈಸಿ ಸೌಭಾಗ್ಯಸನ್ನುತೆಯ ಚೋಳೇಂದ್ರಸುತೆಯ ||೬೨||

ಕೆಂಜವಳ ದೆಕ್ಕಸದ ವುನ್ನತಸ್ತನದ ಮೇ |
ಲಿಂಬುಗೊಂಡಂಗಜನ ಕರಿಕುಂಭಮಧ್ಯದೊಳೆ |
ಡಂಬಡೆದ ಚೆನ್ನೈದಿಲರಲಮಾಲೆಯ ಪೋಲ್ವೆಯಂ ತಳೆಯಲಳವಡಿಸಿದ ||
ಪೊಂಬಟ್ಟೆಯುಡಿಗೆ ಕಂದರ್ಪಕನ ಪಳಯಿಗೆಯಿ |
ದೆಂಬಂತಿರಲು ಗಾಡಿಕಾತಿಯರು ಬಂದರಾ |
ಕಂಬುಕಂಧರೆಯ ಬಿಂಬಾಧರೆಯ ಸೌಂದರಿಯ ಪಲ್ಲಕ್ಕಿಯ ಮುಂಗಡೆಯೊಳು ||೬೩||

ಮುಂಗಯ್ಯಗಿಳಿ ತೊಂಡೆವಣ್ಣೆಂದು ಬಣ್ಣಿದುಟಿ |
ಗಂಗೈಸೆ ನಗೆಮೊಗವ ಮುರಿವುತ್ತೆ ಘನನಿಬಿಡ |
ತುಂಗಕುಚಯುಗದ ಮೃಗನಾಭಿಯಣ್ಪಿನ ಸುಗಂಧಕ್ಕೆರಪ ಮರಿದುಂಬಿಯ ||
ಅಂಗಯ್ಗಳಿಂದೆ ಸೋವುತ್ತೆ ನಡೆತಂದರು ಲ |
ತಾಂಗಿಯರು ತಮ್ಮ ನಡೆನುಡಿನೋಟ ಮುಂತಾದ |
ಶೃಂಗಾರಚೇಷ್ಟೆಯಂಗಜನ ಜಯಸಾಧನ ಸಮೂಹಂಗಳೆಂಬಂತಿರೆ ||೬೪||

ಥಾಳಿಸಲು ಕನಕದಂಡದ ಧವಳಚಮರ ಮಿಗೆ |
ಥಾಳಮಂ ಪಡೆದ ಕಟ್ಟಾಣಿ ಪೊಸಮುತ್ತುಗಳ |
ಕೀಲಿಸಿದ ಹೇಮಾತಪತ್ರಂಗಳೆಡಬಲದೊಳೆತ್ತಿಬರೆ ಕಂಚುಕಿಗಳ ||
ಸಾಲು ಸಂದಣಿಯು ತೊಲಗಿಸುತಿರಲು ರಾಜೇಂದ್ರ |
ಚೋಳಭೂಪಾಲಕನ ತನುಜೆ ಪೊಂಬಲ್ಲಕಿಯ |
ಮೇಲೆ ಬಂದಳು ಸುವಾಸಿನಿಯರಾರತಿಯ ಕೆಂಜೊಡರ ಪುಂಜಂ ರಂಜಿಸೆ ||೪೫||

ಇಳಿಪಿ ಪಲ್ಲಕಿಯಿಂದೆ ಸೌಂದರಿಯ ತಂದು ಮಂ |
ಗಳ ಮುಹೂರ್ತದೊಳು ವೈದಿಕಶೈವಲೌಕಿಕಂ |
ಗಳ ಸತ್ಕ್ರಿಯಾವಿಧಾನಂಗಳಿಂ ರೇವಣಪ್ರಭುವಿಂಗೆ ಮದುವೆಗೆಯ್ದು ||
ಕುಲಶೇಖರೀ ದೇವಿಸಹಿತ ಚರಣಕ್ಕೆರಗಿ |
ಬಳುವಲಿಯನಿತ್ತು ಸಾಷ್ಟಾಂಗಮಂ ಚೋಳನೃಪ |
ತಿಲಕನೆನ್ನಯ ಗೋತ್ರವಿಂದು ಪಾವನವಾದುದೆಂದು ಬುಲ್ಲೈಸುತಿರ್ದ್ದಂ ||೪೬||

ದೇವೇಂದ್ರನಾವೇಳೆಯೊಳು ಕಲ್ಪಭೂರುಹದ |
ಪೂವಿನಿಂ ಪಾದಪೂಜೆಯ ಮಾಡಿ ವಿಮಳರ |
ತ್ನಾವಳಿಯ ಕೀಲಿತಕಿರೀಟ ಕುಂಡಲಹಾರ ಕಟಕಾದಿ ಭೂಷಣವನು ||
ಶೈವದೀಕ್ಷಾ ಚಾರ್ಯವರ್ಯಂಗೆ ತೊಡಿಸಿ ಕರು |
ಣಾವಲೋಕನದಿಂದಭೀಷ್ಟಸಿದ್ಧಿಯ ಪಡೆದು |
ದೇವಲೋಕಕ್ಕೆ ಪೋದನು ದಿವಿಜತತಿವೆರಸಿ ಭುವನವಾಶ್ಚರ್ಯವೆನಲು ||೪೭||

ಚೋಳನಿಂ ಬೀಳ್ಕೊಂಡು ಬಳಿಕ ಗುರುವರನು ಮಲ |
ಯಾಳ ಪಾಂಡ್ಯ ಕಳಿಂಗ ವಂಗ ಕಾಶ್ಮೀರ ನೇ |
ಪಾಳ ಮೊದಲಾದ ದೇಶವಪೊಕ್ಕು ರಾಜಪುತ್ರಿಯರಂ ವಿವಾಹಮಾಗಿ ||
ಬಾಲೆಯರನಿಂತು ಮೂನೂರ್ವರಂ ಬೆರಸಿ ಕಾ |
ಲಾಳು ತೇರಾನೆ ಕುದುರೆಗಳು ಸಂದಣಿಸಿ ಭೂ |
ಪಾಲರೋಲೈಸಿಬರೆ ಬಂದು ಮಂಗಳವಾಡಮಂ ಪೊಕ್ಕು ಸುಖಮಿರ್ದ್ದನು ||೪೮||

ಸುರಭವನ ಪಾತಾಳ ಮುಖ್ಯಲೋಕಂಗಳೇ |
ನೆಮನೆ ಸದಾ ಸನ್ನಿಹಿತವಾಗಿ ನೆನೆವ ಶರ |
ಣರ ಮನವೆ ತಾಂ ನೆಲಸಿದರಮನೆಯೆನಿಸಿ ಜಗದ್ಭರಿತನಾ ಸಿದ್ಧೇಶನು ||

ಇರುತೆ ಸಕಲ ಪ್ರಾಣಿಗಳ್ಗೆ ಹಿತಕರಮಾಗಿ |
ಪರನಿರ್ಮಿಪೆಂ ತಟಾಕಮನೆಂದು ಬಗೆದು ತ |
ತ್ಪುರದ ಪೊರಪೊಳಲುಪವನಾಂತರದ ಪೊರೆಗೊಂದುತಾಣಕ್ಕೆ ಬಂದುನಿಂದು ||೪೯||

ಕರೆಸಿ ನಾನಾಜನಂಗಳನು ಕೆಲಬಲದೊಳಿ |
ದ್ದರೆಗಲ್ಲುಗಳನು ಕಿರುವರಲ್ಗಳಂ ಸೊಂಕಿ ಸುರು |
ಚಿರ ಸುವರ್ಣಂಗಳಂ ರನ್ನಂಗಳಂ ಮಾಡಿ ತಣಿವಂತಿರವರ್ಗೆ ಕೊಟ್ಟು ||
ಉರುತರ ತಟಾಕಮಂ ಕಟ್ಟಿಸುತೆ ಸಿದ್ಧಪತಿ |
ಬರಿಸಿ ತನ್ನಯ ರಾಣಿವಾಸಮಂ ಮೊದಲಲ್ಲಿ |
ಪೊರಬೇಕು ನೀವೀತಟಾಕದೇರಿಗೆ ಮಣ್ಣನೆಂದು ನೇಮವನಿತ್ತನು ||೫೦||

ಧರೆಯ ಶೋಧಿಸಿ ಧರ್ಮಬೀಜಮಂ ಬಿತ್ತುವೊಲು |
ಗುರುವರನು ಗುದ್ದಲಿಯ ಪಿಡಿದಗೆಯ ತೊಡಗಲೊಡ |
ನರಸಿಯರು ಪುಣ್ಯವೆಂದೆಂಬ ಸಿಂಬಿಯನಿಟ್ಟು ಪಾಪಮಂ ಹೊರಸೂಸುವ ||
ಪರಿಯಿಂದೆ ಮಣ್ಣನಡಕುವ ಸಮಯದಲ್ಲಿ ತ |
ತ್ತರುಣೀ ಜನಂಗಳೊಳು ರಾಜೇಂದ್ರ ಚೋಳಭೂ |
ವರನಣುಗಿ ಪೊರಲಾರದೆಕ್ಕಟಿಯೊಳಾಸರಾವರಿಸಿ ಮರವಟ್ಟಿರ್ದ್ದಳು ||೫೧||

ಏನುಕಾರಣ ಮಣ್ಣನಡಕುವುದನುಳಿದು ನೀಂ |
ಮಾನಿನಿ ಬಳಲ್ದೆಕ್ಕಟಿಯೊಳಿರ್ಪ್ಪ ಹದನದೇಂ |
ಮಾನನಿಧಿ ಪೇಳೆನಲು ರಾಜೇಂದ್ರ ಚೋಳಭೂಪತಿಯ ಬಸುರಿಂದೆ ಜನಿಸಿ ||
ಜ್ಞಾನನಿಧಿಯೆನಿಪ ನಿಮ್ಮಡಿಗೆ ವಲ್ಲಭೆಯಾಗಿ |
ಯೊನಿರೋಧಕ್ಕಾರ್ಪನೇ ಎಂದು ಪೇಳ್ದತಿ |
ಜ್ಞಾನದಿಂದಾಕೆ ಮಾಸತ್ರಯದ ಗರ್ಭಿಣಿ ಜಗದ್ಗುರುಗೆ ವಂದಿಸಿದಳು ||೫೨||

ನೀನಾರದಿದ್ರೋಡೆಮ್ಮೊಡವೆಯಂ ಕೊಟ್ಟುಪೋ |
ಗೌ ನಿತಂಬಿನಿ ಯೆಂದೊಡಿಯ್ಯಲರಿಯದ ಮುಗ್ಧೆ |
ಯಾನಾರಿ ಸುಮ್ಮನಿರೆ ಸತಿಯ ಪುಣ್ಯೋದರಮನಾಗಲೊಯ್ಯನೆ ತಡಹಲು ||
ಭೂಸುತನು ರೇವಣೇಶ್ವರನ ಹಸ್ತದೊಳುದಯ |
ಭಾನು ಬಿಂಬಂಬೊಲೊಪ್ಪುವ ಗರ್ಭವುರುಳಲೊಡ |
ನಾನಂದದಿಂ ವಿಭೂತಿಯ ತೊಟ್ಟಿಲೊಳ್ಮಡಗಿ ಪಂಚಾಕ್ಷರಿಯ ಜಪಿಸಿದಂ ||೫೩||

ಪರಶಿವಧ್ಯಾನಮಂ ಮಾಡಿ ತತ್ತೇಜಮಂ |
ಪರಕಲಿಸಿ ಸುಜ್ಞಾನವೆನಿಸುವ ನಿಧಾನಮಂ |
ಧರಣಿಮಧ್ಯದೊಳು ಬಯ್ತಿಡುವಂತೆ ಬಯ್ತಿಟ್ಟು ತಾಯಗರ್ಭದಿನಯ್ದಿಡಿ ||
ಪರುಟವದ ರಕ್ಷೆಯಂತಿರೆ ಪುಣ್ಯದುರುಳೆಯಂ |
ತಿರಲೆಸೆವ ಪಿಂಡವೆಡೆವಡೆದ ತೊಟ್ಟಿಲನು ಭಾ |
ಸುರತಟಾಕದ ಕಟ್ಟೆಯಗ್ರದೊಳಗಿರಿಸಿದಂ ರೇವಣಾಸಿದ್ಧೇಶನು ||೫೪||

ಕ್ಷಮಿಸು ನೀಂ ಪ್ರತ್ಯಕ್ಷಪರಮೇಷನೆಂದು ಭೂ |
ರಮಣ ರಾಜೇಂದ್ರಚೋಳನ ಕುವರಿ ಮೆಯ್ಯಿಕ್ಕಿ |
ನಮಿಸಲೇಳೆಳೆಂಬ ಸಮಯದೊಳು ಪುಷ್ಪಕಮದೆಯ್ದೆ ಕೈಲಾಸದಿಂದೆ ||
ಪ್ರಮಥೆಯಂ ರುದ್ರಕನ್ಯೆಯರು ಕೊಂಡೊಯ್ದರು |
ತ್ತಮವಿಭವದಿಂದುಳಿದ ರಾಣಿವಾಸಂ ಬೆರಸಿ |
ಕಮನೀಯ ಶಿವತತ್ತ್ವಮೂರ್ತಿ ಬಂದೆಂದಿನಂತಿರೆ ಗೃಹದೊಳೊಪ್ಪಿರ್ದ್ದನು ||೫೫||

ಪೆಳೆವರ್ಗ್ಗೆ ಕಾಲ್ಗಳಂ ಪುಟ್ಟುಬಂಜೆಯರ್ಗೆ ಮ |
ಕ್ಕಳನಂಧಕರ್ಗ್ಗೆ ದೃಷ್ಟಿಯನು ಕೊಳುಗುಳದಲಳ |
ವಳಿದು ಕೆಟ್ಟರಸುಗಳವರ್ಗ್ಗೆ ಮಿಗೆ ರಾಜ್ಯಸಂಪದಮನುಂಟಾಗಿಸುತ್ತೆ ||
ಸಲೆ ವೀರಶೈವಸಿದ್ಧಾಂತಚಕ್ರೇಶನ |
ಗ್ಗಲಿಪ ಶಿವಸಿದ್ಧಸಮಯಚಕೋರಚಂದ್ರಿಕಾ |
ವಿಲಸತ್ಕಟಾಕ್ಷನಾ ರೇವಣಾಸಿದ್ಧದೇಶಿಕನು ರಾಜಿಸುತಿರ್ದ್ದನು ||೫೬||

ನಡೆದುದೇ ಪುಣ್ಯಮಾರ್ಗಂ ಮೆಟ್ಟಿದುದೆ ಮೈಮೆ |
ವಡೆದ ದಿವ್ಯಕ್ಷೇತ್ರ ವೊಮ್ಮೆ ಕಾರುಣ್ಯದಿಂ |
ಕಡೆಗಣ್ಣಿನಿಂದೀಕ್ಷಿಸಿದ ಮನುಜನೇ ದೇವನಿದ್ದುದೇ ದೇವಸಭೆಯು ||
ನುಡಿದುದೇ ಪರತತ್ತ್ವ ಮುಟ್ಟಿದುದೆ ಪರುಸವೆಂ |
ಬೆಡೆವಿಡದ ಕೀರ್ತ್ತಿ ಪಸರಿಸೆ ರಂಜಿಸಿರ್ದ್ದನಾ |
ಮೃಡಸನ್ನಿಭನು ರೇವಣಾಸಿದ್ಧಯೋಗಿ ಮಂಗಳವಾಡಪಟ್ಟಣದೊಳು ||೫೭||

ಅರುದಿಂಗಳನಿತಕ್ಕೆ ಸಂಪೂರ್ಣಮಾಗಲಾ |
ಕೆರೆಯ ಬಲ್ಗಟ್ಟೆ ನವಮಾಸಮುಂ ತೀವಿತೆಂ |
ದರಿದು ಶಿಶುವಿಂಗೆ ಸಿದ್ಧೇಶ್ವರಂ ಪುತ್ರಾವಲೋಕನೋತ್ಸಾಹದಿಂಗೆ ||

ತರಸಂದು ಕರೆಸಲೆತ್ತಂದುದಾವೇಳೆಯೊ |
ಳ್ನಿರಿಗುರುಳ ತೋರದುರುಬಿನ ನೀಳ್ದಕಣ್ಣ ನೆರೆ |
ವೆರೆಮೊಗದ ರಾಣಿವಾಸದ ಕದಂಬಂ ಸುವಾಸಿನಿಯರ ಸಮೂಹಸಹಿತಂ ||೫೮||

ಪೊಡೆವ ಮಂಗಳವಾದ್ಯನಿನದ ಮುತ್ತಯ್ದೆಯರು |
ಬಿಡದೆ ಪಾಡುವ ಧವಳಶೋಭನಂಗಳ ಗಾನ |
ಕೊಡಗೂಸುಗಳು ಪಿಡಿದ ರನ್ನಗನ್ನಡಿಗಲಸವೊಪ್ಪೆ ಕೆರೆಯೇರಿಯೆಡೆಗೆ ||
ನಡೆತಂದು ನಮಿಸಿ ಯೂಸಿದ್ಧರಾಣ್ಮಂಗೆಯ್ದೆ |
ಮಡದಿಯರು ಸಾಲ್ವಿಡಿದು ನಿಂದಿರಲು ನೆಲದೊಳಿಹ |
ಕಡವರದ ಮುಚ್ಚುಳಂ ಕಳೆವಂತೆ ತೆಗೆದನಾ ಗುರು ವಿಭೂತಿಯ ತೊಟ್ಟಿಲಂ ||೫೯||

ಜ್ಞಾನರಸವೆಂದೆನಿಪ ಪೊಯ್ನೀರಿನಿಂ ಬಳೆದ |
ನೂನಭಕ್ತಿಕ್ಷೇತ್ರದೊಳು ಶಿವಕಳಾಬೀಜ |
ವೇನಂಕುರಿಸಿ ಪಲ್ಲವಿಸಿ ನಳನಳಿಸಿದಪುದೊ ಪೇಳೆನಲ್ತೊಳತೊಳಗುವ ||
ಮಾನಿತ ಪರಂಜ್ಯೋತಿರಾಕಾರನಂ ನಿರುಪ |
ಮಾನ ಮಹಿಮಾಭಿರಾಮನ ಬಾಲಕನ ಕಂಡು |
ದಾನಿ ಘನಲಿಂಗಾವಧಾನಿ ಯುಮ್ಮಹವನಾಳ್ದನು ರೇವಣಸಿದ್ಧನು ||೬೦||

ಧರೆಗೆ ಕೈಯೆಡೆಗೊಟ್ಟು ಮಗುಳೀಸಿಕೊಂಬಂತೆ |
ತರುಣನಂ ತೆಗೆದೆತ್ತಿಕೊಂಡು ಕೃಪೆಯಿಂ ನೋಡಿ |
ಹರುಷಮಿಗೆ ಮುಂಡಾಡಿ ಪರಸಿ ಮೂರ್ಧಾಘ್ರಾಣಮಂ ಮಾಡಿ ನಲ್ಮೆಗೂಡಿ ||
ಪರಮಗುರು ತಾಯ ಬಸುರಿಂದೆ ಜನಿಸುವ ನೋವ |
ನರಿಯದುದ್ಭವಿಸಿದನೆನುತ್ತೆ ಶಿಶುವಿನ ನಾಮ |
ಕರಣಮಂ ರುದ್ರಮುನಿದೇವನೆಂದಿಟ್ಟು ಭಸಿತವನು ಹಣೆಯೊಳಗಿಟ್ಟನು ||೬೧||

ಕೊರಲೊಳಳವಡಿಸಿ ಶಿವಲಿಂಗಮಂ ರುದ್ರಾಕ್ಷಿ |
ವೆರಸಿದೆಳಮುತ್ತಿನಾಭರಣಂಗಳಂ ತೊಡಿಸಿ |
ಮಿರುಪ ಪೊಂದೊಟ್ಟಿಲೊಳಗಿಟ್ಟು ಪಟ್ಟದ ಭದ್ರಗಜವ ಶೃಂಗರಿಸಿ ತರಿಸಿ ||
ಇರಿಸಿಯದರಗ್ರದೊಳು ರುದ್ರಮುನಿದೇವ ಸ |
ದ್ಗುರುನಾಥನಂ ಸಕಲ ಸಂಭ್ರಮದ ಸಡಗರದೆ |
ಪುರವ ಪೊಕ್ಕರಮನೆಯೊಳೊಪ್ಪುತಿರ್ದನು ರೇವಣಸಿದ್ಧಯೋಗೀಂದ್ರನು ||೬೨||

ಧರ್ಮಧ್ವಜಂ ದಯೊಮೇರು ಪರಶಿವತತ್ತ್ವ |
ಮರ್ಮಜ್ಞನನ್ಯಸಮಯದ ವಾದಿಜನವೆಂಬ |
ಕಾರ್ಮುಗಿಲ ಪೊದರಿಂಗೆ ಜಂಝೂಮರುತ್ಸಾಮ್ಯನಾ ಸಿದ್ಧಚಕ್ರೇಶನು ||
ಕರ್ಮಭಕ್ತಿಜ್ಞಾನದುಪದೇಶಮಂ ಜಗಕೆ |
ನಿರ್ಮಳವೆನಿಪ್ಪಂತೆ ಕಾಣಿಸುತೆ ನತವಜ್ರ |
ವರ್ಮನಿರ್ದ್ದಸು ರಾಜವಿಭವದಿಂ ಘನಲಿಂಗ ಭೋಗೋಪಭೋಗಿಯಾಗಿ ||೬೩||

ಪರಶಿವಾತ್ಮಕನೆನಿಪ ಶಾಂತಬಾಲೇಶ ಸ |
ದ್ಗುರುಮೂರ್ತಿ ಬೆಸಸಲಾಂ ವಿರಚಿಸಿದ ರಸಿಕಕೆ |
ರ್ಣರಸಾರ್ಣ್ಣವೆಂದೆನಿಪ ಕಾವ್ಯಸಿದ್ಧೇಶ್ವರ ಪುರಾಣದೊಳು ಸಿದ್ಧೇಂದ್ರನು ||
ಸುರಪನಿಂ ಪೂಜೆಗೊಂಡವನಿಪಾಲರ ಕುವರಿ |
ಯರ ಮದುವೆಯಾಗಿ ಸುಖಮಿರುತಂದು ರುದ್ರಮುನಿ |
ವರನೆಂಬ ಕುವರನಂ ಪಡೆದ ಶುಭಕರಕಥನ ವಿಂತಿದೊಂಭತ್ತುಸಂಧಿ ||೬೪||

## ಒಂಭತ್ತನೆಯ ಸಂಧಿಯು ಮುಗಿದುದು.



ಓಂ ಶಿವಾಯನಮಃ.

## ( ಹತ್ತನೆಯ ಸಂಧಿಯು. )

ಸೂ || ಪರಮಪ್ರಕಾಶಮಯವಪ್ಪ ಶಿವಲಿಂಗತ |
ತ್ತ್ವರಹಸ್ಯಮಂ ಪೇಳ್ದು ರುದ್ರಮುನಿಪತಿಗೆ ಸ |
ದ್ಗುರುಪಟ್ಟಮಂ ಕಟ್ಟಿದಂ ರೇವಣಾಚಾರ್ಯವರ್ಯನತುಳೌದಾರ್ಯನು ||

ಮಿರುಪ ಕಿರುವೆರೆಯ ಬಾಂದೊರೆಯ ಕೆಂಜಡೆಮಡಲ |
ತುರುಬಿನೊಳಗಳವಡಿಸಿ ಪೆಡೆಸಾಸಿರದ ನಾಗ |
ಕರೆಯನಂ ಜನ್ನಿವರಮಾಗಿ ತಾಳ್ದೆಸೆವ ಪೊಂಬುಲಿದೊವಲಿನುಟ್ಟಿಗೆಯನು ||
ಮೆರೆವಂತಿರುಟ್ಟು ನೇಸರ ಮಗನ ಪೆರ್ದಲೆಯ |
ತುರುಗಲಂ ಕೋದೆಕ್ಕಸರಮನಿಟ್ಟಚ್ಚನು |
ಣ್ಗರೆಗೊರಲ ಶಾಂತಮಲ್ಲೇಶ ಪಾಲಿಸು ಭಕ್ತಿಯೆರಕದುರುಸೊಂಪುಗರೆದು ||೧||

ಪರಮಪಂಚಾಕ್ಷರಿಯ ಬಾಯ್ವೆಣ್ಣೆಯಾಗಿಟ್ಟು |
ನಿರುಪಮಜ್ಞಾನಾಮೃತವನೆರೆದು ಸಾತ್ವಿಕೋ |
ದ್ಧುರಬುದ್ಧಿಯೆನಿಪ ದೇವಾಂಗವಸ್ತ್ರವ ಪೊದಿಸಿ ಶಿವತತ್ತ್ವವೆಂದೆನಿಸುವ ||
ಪಿರಿಯ ಪೊಂದೊಟ್ಟಿಲೊಳಗಿಟ್ಟು ಬಳೆಸುತ್ತಿರ್ದ್ದ |
ನುರುತರಪ್ರಕಾಶ ಶಿವತತ್ತ್ವನಿಧಿ ರೇವಣೇ |
ಶ್ವರನು ನಿಜಪುತ್ರನಂ ಪುಣ್ಯಮಯಗಾತ್ರನೆನಿಸುವ ರುದ್ರಮುನಿದೇವನಂ ||೨||

ಇಂತು ಶಾನೇ ಸಲಹುತಿರಲೊಂದುದಿನದೊಳೇ |
ಕಾಂತದೊಳು ವೀರಬಿಜ್ಜಳನೃಪನ ಕುವರಿಯ |
ತ್ಯಂತಗುಣವತಿ ಸುಲಕ್ಷಣೆಯಾದಿಯಾದ ರಾಣಿಯರು ವಂದಿಸಿ ಕೀರ್ತಿಸಿ ||
ನೀಂ ತಿಳಿಪುಸರ್ವಜ್ಞ ಸೌಂದರಿಯದೇಂಕಾರ |
ಣಂ ತಳುವದಭವನ ನಿವಾಸಕ್ಕೆ ಪೋದವ್ವು |
ಕ್ಷಾಂತಮನೆನಲ್ಪೇಳಲೆಂದುಪಕ್ರಮಿಸಿ ಸದ್ಗುರುನಾಥನಿಂತೆಂದನು ||೩||

ಗಿರಿಜೆಗಾಪ್ತೆಯರು ಜಯೆವಿಜಯೆಯರೆನಿಪ್ಪರಿ |
ರ್ವ್ವರು ಮಹಾಶಕ್ತಿಗಳು ಪೂರ್ವದಿಂದೆಮ್ಮ ಸತಿ |
ಯರು ಬಂದು ಶಿವಲೋಕವಿಂದೀಶನಾಜ್ಞೆಯಿಂ ಚೋಳಪಾಂಡ್ಯರ ಬಸುರೊಳು ||
ದರೆಯೊಳವತರಿಸಿ ಕಾಂತೆಯರಾದರೆಮಗೆ ಸೌಂ |
ದರಿಪುಣ್ಯವತಿಗಳೆಂದೆಂಬ ಪೆಸರಿಂದಲೆಂ |
ದೊರೆದಂ ಸದಾಶಿವನ ಲೀಲಾಸ್ವರೂಪನಾ ರೇವಣಪ್ರಭುರಾಯನು ||೪||

ಸೌಂದರೀದೇವಿಯೇಂಕಾರಣಂ ಶಿವನೆಡೆಗೆ |
ಮುಂದೆಪೋದಳೆನುತ್ತೆ ಬಿನ್ನೈಸೆ ವಿಮಳತರು |
ಣೇಂದುಶೇಖರನು ನಿನ್ನುದರದೊಳಗೊರ್ವ್ವಂ ಮಹಾಯೋಗಿಯುದಯಿಸಿದಪಂ ||
ಅಂದುಶಾಂಭವಲೋಕದೆಡೆಗೆ ಬಹುದೆಂದು ಜಯೆ |
ಯೆಂದೆನಿಪ ಶಕ್ತಿಯಂ ಬೀಳ್ಕೊಟ್ಟನಾಕೆಯಿಾ |
ಸೌಂದರೀದೇವಿಯೆಂದುಸಿರ್ದಂ ಸುಲಕ್ಷಣೆಯರಾದಿಯುಹ ಮಡದಿಯರೊಳು ||೫||

ನೀವೆಲ್ಲರುಂ ಪೂರ್ವದೊಳ್ ರುದ್ರಕನ್ಯೆಯರು |
ದೇವದೇವೇಶ್ವರನ ನೇಮದಿಂದವತರಿಸಿ |
ಭೂವಳಯದೊಳಗೆಮ್ಮ ಸೇವೆಯುಂ ಮಾಳ್ಪ ಸಂಪದಕೆ ಭಾಜನವಾದಿರಿ ||

ಈ ವಿಧಂ ತಥ್ಯವೆಂದುಸಿರ್ದಾ ಕುಮಾರನಂ |
ಪಾವನಾತ್ಮಕಿ ಪುಣ್ಯವತಿಗೀಯೆ ಸಂತಸದೊ |
ಳೋವುತಿರ್ದ್ದಳು ಕಲ್ಪಕುಜದ ಸಸಿಯಂ ಪೊರೆವ ವಾಸಂತಲಕ್ಷ್ಮಿಯಂತೆ ||೬||

ಪನಿನೀರನಿರದೆ ಬೆಚ್ಚನೆಮಾಡಿ ಶಿಶುಗೆ ಮ |
ಜ್ಜನವ ಮಾಡಿಸಿ ಮಗಮಗಿಪ ಮಲಯಜದ ರಸಮ |
ನನುಲೇಪನಂಗೆಯ್ದು ಭಸಿತದಿಂ ಸೊಡರ್ಗುಡಿಯ ಕಪ್ಪಿನಿಂ ಬಟ್ಟನಿಟ್ಟು ||
ತನಿವಾಲ್ಗೆ ತವರಾಜಸಕ್ಕರೆಯನೊಡಗಳೆಸಿ |
ಯನುರಾಗದಿಂದೆರೆದು ಪಟ್ಟವಳಿಯಂ ಪೊದಿಸಿ |
ಕನಕಮಯತೊಟ್ಟಿಲೊಳ್ಪಟ್ಟಿರಿಸಿ ಸಲಹುತಿರ್ದ್ದಳು ಪುಣ್ಯವತಿ ಮುದದೊಳು ||೭||

ಕ್ಷಿತಿಗಿಳಿದುಬಂದ ನಕ್ಷತ್ರವೆನೆ ಪೊಳಪು ಬ |
ಟ್ಟಿತು ಲಕ್ಷಣಂದಳೆದ ಮುಕ್ತಾಫಲೌಘಸಂ |
ಯುತವಾದ ಸಣ್ಣರುದ್ರಾಕ್ಷಿ ಯೊಜ್ಜರವ ಕೊರಳ್ಕಟ್ಟಿ ಕಣ್ಗೊಪ್ಪುವ ||
ವಿತತಪ್ರಕಾಶದ್ವೈರನ್ನತೆತ್ತಿಸಿ ಸಮು |
ನ್ನತಿವೆತ್ತ ಬಾಲದೊಡುಗಯ ತೊಡಿಸಿ ಮಿಗೆ ಪುಣ್ಯ |
ವತಿ ಸಲಹುತಿರ್ದ್ದಳಾ ಭುವನವಿನುತಪ್ರಭಾವನ ರುದ್ರಮುನಿದೇವನ ||೮||

ನಸುನಗುವನೋರೊರ್ಮ್ಮೆ ಸಂಸಾರಪಾಶದಿಂ |
ಪಶುವಿನಂತಿರೆ ಕಟ್ಟುವಡೆದುದಿಳೆಯೆಂದು ದರ |
ಹಸಿತಮುಖನಪ್ಪಂತೆ ಶಿವಶಾಸ್ತ್ರಸೂತ್ರಸಂಜ್ಞಾಕ್ಷರವಿದೆಂಬಂದದಿಂ ||
ಉಸಿರ್ವನವ್ಯಕ್ತವಚನಂಗಳಂ ಚರಣದಿಂ |
ಮಿಸುನಿದೊಟ್ಟಿಲನೊದೆವ ನಾನತರ ಭವಭಯವ |
ನಿಸದಮಿಂತೊದೆವೆನೆಂದಾ ಚಿದಾತ್ಮಕಭಾವನಾ ರುದ್ರಮುನಿದೇವನು ||೯||

ಎವೆವೊಯ್ಯದೀಕ್ಷಿಪಂ ಶಿವಕಳೆಯ ನೋಡುವಂ |
ದವಿದೆಂಬ ಮಾಳ್ಕೆಯಿಂ ಕಣ್ಮುಚ್ಚಿ ನಿದ್ರೆಯಂ |
ತವೆ ಮಾಳ್ಪನಂತರಂಗದೊಳಿಹ ಪರಬ್ರಹ್ಮಮಂ ಬೋಧದೃಷ್ಟಿಯಿಂದೆ ||
ನವವಿಧದೆ ದಿಟ್ಟಿಪಂತಿರೆ ಮುಗುಳ್ದು ಕಣ್ದೆರೆದು |
ಶಿವತತ್ವವಿದೆಕಂಡೆನೆದು ತೋರ್ಪಂತೆ ತುಡು |
ಕುವನು ಕಯ್ಯಿಂದೆ ಬಯಲಂ ಶೈಶವದೊಳೀ ಕ್ರಮದಿ ರೇವಣೇಂದ್ರಸುತನು ||೧೦||

ಶಾಜೆಸುತ್ತಿಂತು ಬಾಲ್ಯಂಪೋಗಿ ಶಿವಯೋಗಿ |
ರಾಜಂಗೆ ರುದ್ರಮುನಿಗೆಂಟನೆಯವರ್ಷದೊಂ |
ದೋಜೆವೆರಸಿದ ಹರೆಯವಾಗೆ ಭಕ್ತಿಜ್ಞಾನವೈರಾಗ್ಯವೆಂಬಿವಿನಿತು ||
ನ್ನೈಜಮಾಗೊಪ್ಪುತಿರ್ದುದು ಭುವನಜನವೆಲ್ಲ |
ಸೋಜಿಗಂಬಟ್ಟಿಯ್ದೆ ಕೀರ್ತಿಸುತ್ತಿರೆ ಯಥಾ |
ಬೀಜಂ ತಥಾಂಕುರಮೆನಿಪ್ಪ ವಾಕ್ಯದ ಪುರುಳ ಕನ್ನಡಿಸುತೆಸಕದಿಂದೆ ||೧೧||

ತನಿವಾಲ್ಸಿ ಸಿಹಿ ಸಹಜಮಾದೊಡಂ ಗಟ್ಟಿಗೊಂ |
ಡನಿದಾಗದನಲಸಂಪರ್ಕದಿಂದಲ್ಲದೆಂ |
ದೆನಿಪಂತಿರಾ ರುದ್ರಮುನಿಗೆ ಶಿವತತ್ತ್ವಕಳೆ ಸಂಪೂರ್ಣಮಾಗಿರ್ದೊಡಂ ||
ಅನುವದಿಸಿದಲ್ಲದಾದಂಪ್ರಜ್ವಲತೆವಡೆಯ |
ದೆನುತಂದು ರೇವಣೇಶ್ವರನು ಸಮ್ಯಗ್ಜ್ಞಾನ |
ದನುಭವದ ಮಂಟಪಕೆ ಬರಿಸಲಭಿನಮಿಸಿ ನೇಮಂಬಿಡಿದು ಕುಳ್ಳಿರ್ದನು ||೧೨||

ಸುರಭಿ ಸುಮನೆ ಸುಶೀಲೆ ನಂದೆ ಭದ್ರೆಗಳು ಶಂ |
ಕರನೈಮೊಗದ ಕಳೆಗಳಿಂದುದಯವಾದುವವ |
ರುರುತರಪವಿತ್ರಗೋಮಯದಿನಾದುದು ಪಂಚವಿಧಭಸಿತ ವಿಂತಿನಿತನು ||
ಧುರುವುದೆಂದಾಚಾರ್ಯ ನವರ ಮಹಿಮೆಯನು ವಿ |
ಸ್ತರಿಸಿ ರುದ್ರಾಂಬಕಾಂಬುವಿನಿಂದೆ ಸಂಭವಿಸಿ |
ಧರಣಿಯೊಳು ಪೆಸರ್ವಡೆದ ರುದ್ರಾಕ್ಷಮಾಹಾತ್ಮ್ಯಮಂ ಜಲಕ್ಕನೆ ಬೆಸಸಿದಂ ||೧೩||

ವೇದಕ್ಕೆ ಮಾತೆ ಗಾಯತ್ರಿ ಭಾರಿಸುವೊಡೆ |
ಲ್ಲಾದಿವ್ಯಮಂತ್ರಕ್ಕೆ ಮಾತೆ ಪಂಚಾಕ್ಷರಿ ಮ |
ಹಾದೇವನೇ ಸಕಲದೈವಕ್ಕೆ ಪಿತ ನಖಿಲಶಕ್ತಿಸಂತತಿಗೆ ನೋಡೆ ||
ಮಾದೇವಿಯೇ ಮಾತೆ ವಂದಿನೀಯರೊಳು ಮೊದ |
ಲಾದವಂ ಗುರುವೆಂದು ಪೇಳ್ದ ನತ್ಯಂತಘನ |
ಬೋಧೋದಯಂಗೆ ಕಂದಂಗೆ ವರಸಚ್ಚಿದಾನಂದಂಗೆ ಸಿದ್ಧೇಶನು ||೧೪||

ಸಾನಂದನೆಂಬ ಗಣನಾಥನೊರ್ವಂ ಮುನ್ನ |
ಭಾನುಸೂನುವಿನ ಪೊಳಲಿಗೆ ಪೋಗಿ ನಿಟ್ಟಿಸಿ ಮ |
ಹಾನರಕವುಂಬ ಪಾಪಿಗಳೆಲ್ಲರಂ ಕರುಣಿಸಿ ಪುಣ್ಯಾತ್ಮರಂ ಮಾಡಿದಂ ||
ಈನಿಖಿಳಸಮುಪ್ರಜಲಮಂತ್ರದಿಂದೆಂದು ಸು |

ಜ್ಞಾನಪ್ರಕಾಶನಿಧಿ ರೇವಣಸಿದ್ಧೇಶ |
ನಾನಂದದಿಂ ನಿರೂಪಿಸಿ ಯಣುಗನಂ ನೋಡಿ ಕರುಣಾಕಟಾಕ್ಷದಿಂದೆ ||೧೫||
ಕಪಿಲಗೌತಮಕಣಾದಾತ್ರಿಶಾತಾತಪಮು |
ನಿಪಭರದ್ವಾಜರೋಮಶಜಹ್ನುಜಾಬಾಲಿ |
ಯುಪಮನ್ಯುವಾಮದೇವವಸಿಷ್ಠರಾದಿಯಾಗಿರ್ದ ಶಿವಯೋಗೀಂದ್ರರು ||
ಜಪಿಸಿ ಈಮಂತ್ರಮಂ ಧರ್ಮಾರ್ಥಕಾಮಮೋ |
ಕ್ಷಪದಂಗಳಂ ಪಡೆದರೆಂದನು ಸಮಸ್ತಜಗ |
ದುಪದೇಶಕರ್ತುವಾ ರೇವಣಸಿದ್ಧೇಶ್ವರನು ರುದ್ರಮುನಿದೇವಗೆ ||೧೬||
ಭುವನವೆಲ್ಲಂ ಶಿವಾಧೀನ ವಂತಾಸದಾ |
ಶಿವನು ಪಂಚಾಕ್ಷರೀದಿವ್ಯಮಂತ್ರಾಧೀನ |
ನವನಿಯೊಳಗಾ ದಿವ್ಯಮಂತ್ರವಾಚಾರ್ಯನಿಗಧೀನವಾಗಿಹುದದಾಗಿ ||
ನಿವರಿಪೊಡೆ ಗುರುವೇ ಮಹಾದೈವವಿದಕೆ ಸಾ |
ಕ್ಷಿ ವಿಶೇಷವೇದಶಾಸ್ತ್ರಾಗಮಂಗಳೆನುತ್ತೆ |
ತವೆ ಕರುಣವಾಗಿ ಪೇಳ್ದಂ ಪರಂಜ್ಯೋತಿಸ್ವರೂಪನಾ ಸಿದ್ಧೇಶನು ||೧೭||
ಗುರುನಾಥನಿತ್ತಿಷ್ಟಲಿಂಗಮಂ ಪೂಜಿಪುದು |
ಧರಿಯಿಪುದು ತತ್ಪ್ರಸಾದದ್ರವ್ಯತತಿಯ ನನು |
ಕರಿಸುವುದು ಸಂತತಂ ನೆನೆವುದು ಶಿವಾದ್ವೈತಕೋವಿದರ ಸಂಸರ್ಗವಂ ||
ವಿರಚಿಪುದು ತತ್ಸದಾಶಿವಕಳೆಯ ನಾತ್ಮನೊಳು |
ಬೆರಸಿಕೊಂಡಿರ್ಪುದು ಕಣಾ ವೀರಶೈವತ |
ತ್ತ್ವರಹಸ್ಯವೆಂದು ಪೇಳ್ದಂ ಕುಮಾರಂಗೆ ಜಿತಮಾರಂಗೆಯತಿರಾಜನು ||೧೮||
ಕರಪೀಠದೊಳ್ ಶಿವಾರ್ಚನೆಗೆಯ್ದು ತನುವಿನೊಳು |
ಧರಿಸಿಕೊಂಡಿಹನಿಷ್ಟಲಿಂಗಿ ಯಂತಃಕ್ರಿಯಾ |
ವಿರಚನೆಗಳಿಂ ಶಿವನ ಭಜಿಪಾತನೇ ಪ್ರಾಣಲಿಂಗಿ ಭಾವದೊಳಭವನಂ ||
ಬೆರಸಿಕೊಂಡಿರ್ಪಾತನೇ ಭಾವಲಿಂಗಿ ಜೆ |
ಷ್ಟರಮಿವರ ಭೇದಮಂ ತಿಳಿಯೆಂದನಾತ್ಮಜಂ |
ಗೆರಡನೆಯ ಶಂಕರನು ನತಭವಭಯಂಕರನು ಸಿದ್ಧಶಿವಯೋಗೀಂದ್ರನು ||೧೯||
ತ್ಯಾಗಾಂಗವೇ ಇಷ್ಟಲಿಂಗಾಭಿವರ್ತನಂ |
ಭೋಗಾಂಗವೇ ಪ್ರಾಣಲಿಂಗಪ್ರವರ್ತನಂ |

ಯೋಗಾಂಗವೇ ಭಾವಲಿಂಗವರ್ತನ ವಧಿಕಸಂಸೃತಿ ಪರಿತ್ಯಾಗವೆ ||
ತ್ಯಾಗಾಂಗ ಲಿಂಗಭೋಗೋಪಭೋಗಕ್ರಮವೆ |
ಭೋಗಾಂಗ ವಾವಗಂ ಭಾವದೊಳು ಬೆರಸಿಹುದೆ |
ಯೋಗಾಂಗವೆಂದು ಪೇಳ್ದಂ ಪರಬ್ರಹ್ಮಪುರುಷನು ರುದ್ರಮುನಿದೇವಗೆ ||೨೦||
ಕ್ಷಮೆಯೆ ಸಲಿಲಂ ವಿವೇಕಮೆ ವಸ್ತ್ರ ಸತ್ಯಮು |
ತ್ತಮವಿಭೂಷಾವಳಿ ವಿರಕ್ತಿಯೇ ಪುಷ್ಪತತಿ |
ವಿಮಳಗಂಧಮೆ ಸಮಾಧಾನ ವಕ್ಷತೆಯೆ ನಿರಹಂಕಾರ ವಿಶ್ವಾಸಮೆ |
ಕಮನೀಯಧೂಪ ಸಮ್ಯಗ್ಜ್ಞಾನ ದೀಪ ವಿ |
ಭ್ರಮಿಸದಿರವಮೃತಾನ್ನನೈವೇದ್ಯ ವಿಷಯಾರ್ಪ |
ಣಮೆ ಸುತಾಂಬೂಲಮಿಂತರ್ಚಿಪನೆ ಲಿಂಗಾಂಗಿಯೆಂದ ನೆರಡನೆಯ ಶಿವನು ||೨೧||
ಗುರುವಿಂಗೆ ತನುವ ನರ್ಥವನು ಜಂಗಮಕೆ ನಿಜ |
ಕರಣಂಗಳಂ ಲಿಂಗಕೊಪ್ಪುಗೊಟ್ಟಾಚಾರ |
ಪರನಾಗಿ ಕಾಮಿಸದೆ ಕೋಪಿಸದೆ ಗರ್ವಿಸದೆ ಜರೆಯದೆ ಪರಿಭ್ರಮಿಸದೆ ||
ಪಿರಿದುಂ ಸಮಾಧಾನದಿಂ ಸುಖದೊಳಿಸುದೆ ಬಂ |
ಧುರತರಪ್ರಾಣಲಿಂಗಿಸ್ಥಲವಿದೆಂದು ಬಿ |
ತ್ತರಿಸಿದನು ಭವವಿಪಿನದಾವಂಗೆ ರುದ್ರಮುನಿದೇವಂಗೆ ಸಿದ್ಧೇಂದ್ರನು ||೨೨||
ಹುರಿದ ಬಿತ್ತಿಂಗೆ ಮಗುಳ್ದಂಕುರಂ ಸಮನಿಪುದೆ |
ಗುರುಕಟಾಕ್ಷದ ನೋಟದಿಂದೆ ಪರಶಿವದೀಕ್ಷೆ |
ದೊರೆಕೊಂಡವಂಗೆ ಜನ್ಮಾಂತರಂ ಮರಳಿ ಸಂಭವಿವುದೆ ಭಾವಿಸುವರೆ ||
ಗರುಡಂಗೆ ಸರ್ಪವಿಷಭಯವುಂಟೆ ಸುಜ್ಞಾನ |
ನಿರತನಾಗಿರ್ದ ಶಿವಶರಣಂಗೆ ಕಾಲಕಾ |
ಮರ ಭೀತಿಯುಂಟೆ ಪೇಳೆಂದನಾ ಪೆಣೆಗಣ್ಣನಣುಗನೊಳು ಕರುಣದಿಂದೆ ||೨೩||
ಪರಮಶಿವತತ್ತ್ವವಿಜ್ಞಾನವೇ ಅಂಗ ವ |
ತ್ಯುರುತರಜ್ಞೇಯವೇ ಲಿಂಗ ವೀಯುಭಯಸಂ |
ಕರವುಳ್ಳನೇ ಜ್ಞಾತೃವಾತ ತಾನೇ ಅಂಗಲಿಂಗಸಂಬಂಧಿಯೆನಿಪ ||
ತರಣಸಿದು ವೇದಾಂತಸಿದ್ಧಾಂತವೆಂದು ವರ |
ಗುರು ಕಳಾಸಂಪೂರ್ತಿಯುಂಮಾಡಿ ರುದ್ರಮುನಿ |
ವರನ ಬೋಳೈಸಿದನು ಪರಶಿವಜ್ಞಾನಪ್ರಕಾಶನಾ ಸಿದ್ಧೇಶನು ||೨೪||

ಸಂತೋಷದಾಗರದೊಳೋಲಾಡಿ ಧನ್ಯನಾ |
ದಂ ತಿಳಿದೆ ನಧಿಕಶಿವತತ್ತ್ವವಂ ಭವಹರ ಮ |
ದಂತರಂಗಜ್ಯೋತಿರಾಕಾರ ನಿಗಮಾಂತಸಾರವಿಜ್ಞಾನಪೂರ ||
ಶಾಂತಮಲ್ಲೇಶ್ವರಸಮಾನ ಭಕ್ತನಿಧಾನ |
ಶಂಭುಮದಮಥನ ಎಂದೆರಗಿದಂ ಸಾಷ್ಟಾಂಗ |
ದಿಂ ತಂದೆಗಪ್ರತಿಮತೇಜಂಗೆ ರುದ್ರಮುನಿಕಾಂತ ನಮಳಸ್ವಾಂತನು ||೨೫||

ಆದಿಯೊಳು ಶಂಕರನ ಪಂಚಮುಖದಿಂದುದಯ |
ವಾದುವಿಪ್ಪತ್ತೆಂಟುದಿವ್ಯಾಗಮಂ ಸಕಲ |
ವೇದವಿನಿತರೊಳಧಿಕವೀವೀರಶೈವಸಿದ್ಧಾಂತ ವಿದರಾಚರಣೆಯಂ ||
ಮೇದಿನಿಯೊಳಾನತ ಜನಂಗಳಿಗೆ ಬೋಧಿಸೆಂ |
ದಾದಯಾಂಬುಧಿ ರೇವಣೇಶ್ವರಂ ನಂದನನ |
ನಾದರಿಸಿ ನೊಸಲೊಳಿಟ್ಟಂ ವಿಭೂತಿಯನು ಪರಮವಿಭೂತಿಕಾರಣವನು ||೨೬||

ಧಾರಿಣಿಯ ಮೇಗಿರ್ದನಂತಶಿಷ್ಯರ ಕರೆಸಿ |
ವಿಖ್ಯಾತಬಿಜ್ಜಳನೃಪತಿ ರಾಜೇಂದ್ರಚೋಳಧರ |
ಣೀರಮಣ ಪಾಂಡ್ಯನೃಪ ಮುಂತಾದ ರಾಯರೆಲ್ಲರ ಬರಿಸಿ ಶಿವಶರಣರು ||
ಸಿರಂತೆ ತಿಂತಿಣಿಸಿ ಸಂತಸಂಗೈದು ಮನ |
ವಾರೆ ಸಂಭ್ರಮದಿಂದೆ ಜಗದಾದಿದೇಶಿಕನು |
ವೀರಶೈವಾಚಾರ್ಯಪಟ್ಟಮಂ ಕಟ್ಟಿದಂ ರುದ್ರಮುನಿವಲ್ಲಭಂಗೆ ||೨೭||

ಶರಣಜನಹೃದಯಕಮಲಭ್ರಮರ ನಘತಿಮಿರ |
ನಿರುಹರಣಕರಣ ನನವರತಶಿವಯೋಗಿಶೇ |
ಖರ ಶಾಂತಬಾಲೇಶ ಚೆಸಸಲಾಂ ಪೇಳ್ದ ಸಿದ್ಧೇಶ್ವರಪುರಾಣದೊಳಗೆ ||
ಪರಶಿವಕಳಾಸ್ವೀಕೃತಾತ್ಮಕನು ರೇವಣೇ |
ಶ್ವರನು ನಿಜತನುಜಂಗೆ ರುದ್ರಮುನಿಪತಿಗೆ ಸ |
ದ್ಗುರುರಾಜಪಟ್ಟಮಂ ಕಟ್ಟದುತ್ತಮಕಥನವೀರಯ್ದು ಮೆರೆವ ಸಂಧಿ ||೨೮||

## ಹತ್ತನೆಯ ಸಂಧಿ ಮುಗಿದುದು.

: 0 :

# ಹನ್ನೊಂದನೆಯ ಸಂಧಿ.



ಸೂ|| ದೇಶಾಂತರಂಗೆಯ್ಯಲೆಂದು ಪೊರಮಟ್ಟು ಸಿ |
ದ್ಧೇಶನಾ ಪೊಳಲಿಂದೆ ಬಂದು ಹಾವಿನಹಾಳೊ |
ಳೀಶಭಕ್ತಂಗೆ ಕಲ್ಲಯ್ಯಂಗೆ ರುದ್ರಮುನಿಯಿಂ ದೀಕ್ಷೆಯಂ ಕುಡಿಸಿದಂ ||

ಸಿಂದುರಾಜಿನವಸನ ಕಂಧರಸ್ಥಾನಾನು |
ಬಂಧಹಾಲಾಹಳ ಜಳಂಧರಾಸುರಗರ್ವ |
ಸಿಂಧುವಡಬಾಮುಖಾನಲ ಕಸದರ್ಾಕಲಿತಬಂಧುರಾವೃತಮಯೂಖ ||
ಗಾಂಧಾರಪಂಚಮಾದಿಸ್ವರೋದಿತಸಾಮ |
ಗಾಂಧರ್ವರಸಲೋಲ ಶಿವವಿಷ್ಣು ಭಕ್ತಜನ |
ಬಾಂಧವ ವೃಷಾರೂಢ ಶಾಂತಮಲ್ಲೇಶಸುರಸಿಂಧುಧರ ರಕ್ಷಿಸೆಮ್ಮಂ ||೧||

ಕಳುಹಿ ರಾಜೇಂದ್ರಜೋಳಂ ಮುಖ್ಯರಾದ ಭೂ |
ತಳಪಾಲರಂ ಬಳಿಕದೊಂದುದಿನ ವೀರಬಿ |
ಜ್ಜಳನೃಪನ ಬರಿಸಿ ಯಾವಿನ್ನು ದೇಶಾಂತರಂಮಾಡಿದಪೆವೆಂದು ಬೆಸಸಿ ||
ಪೊಳಲೋಳಾತನ ನಿರಿಸಿ ರುದ್ರಮುನಿಪತಿಯು ನಂ |
ದಳವನೇರಿಸಿ ಪಟ್ಟದಿಭದಪೇಲಡರಿ ಮಂ |
ಗಳಮೂರ್ತಿ ರೇವಣಾಸಿದ್ಧಶಿವಯೋಗಿ ಘನವಿಭವದಿಂ ಪೊರಮಟ್ಟನು ||೨||

ಬಿರುದೆತ್ತಿ ಕರೆವ ಹೆಗ್ಗಾಳೆಗಳ ನಭವನ |
ಳ್ಳಿರಿವ ವೃಷಭಧ್ವಜವ್ರಜದ ಕಂಚುಕಿಗಳ |
ಬ್ಬರದ ನೆಗಪಿದ ಮುತ್ತುಗೊಡೆಯ ಢಾಳಿಪ ಧವಳಚಾಮರದ ಕೈವಾರಿಪ ||
ಶರಣರ ಸಮೂಹ ಏಕ್ಕೆಲದೊಳೋಲೈಪ ಕರಿ |
ತುರಗರಥಪತ್ತಿಗಳ ಸೌರಂಭ ಮಿಟ್ಟಣಿಸೆ |
ತೆರಳಿದಂ ರೇವಣಾಸಿದ್ಧಶಿವಯೋಗಿರಾಯನು ದಿವ್ಯರುಚಿಕಾಯನು ||೩||

ಸರಸಿರುಹಸಖನ ತುರಗಕ್ಕೆ ಕೆಂಬಟ್ಟೆವ |
ಕ್ಕರಿಕೆಯಂತಿರೆ ಗಗನನದಿಗೆ ಕೆಂಬೊಳೆಯೊಡಂ |
ಬೆರಸಿದಂತಿರೆ ದಿಶಾಂಗನೆಯರಿಂಗೆ ಮಾಣಿಕದ ಸೂಸಕಮ ನಿಟ್ಟಂತಿರೆ ||
ಸ್ಫುರಿಸಲರುಣಚ್ಛಾಯೆಯಿಂ ಭುವನವನಿತನಾ |
ವರಿಸಿ ನೆಗೆದುದು ಧೂಳಿ ರೇವಣಾಸಿದ್ಧಗುರು |
ವರನೆಣಿಕೋಲೈಸಿ ಬಹ ಚತುರಂಗಸೇನಾಸಮುದ್ರದೊಳಗುರ್ವುವಡೆದು ||೪||

ವಾರುವಂಗಳ ಖುರಕೆ ಸೇರಿಸಿದ ದೀಪ್ತಿವ |
ಚ್ಚಾರುಚಾಮೀಕರದ ಲಾಳಗಳ ರಜದ ರವೆ |
ವಾರಣಘಟಾಕೋಟಿಯೊತ್ತರಿಸಿ ನಡೆವ ವೇಳೆಯೊಳು ಮೊಗವಡದಿನುದಿರ್ದ ||
ಭೂರಿಮುಕ್ತಾಫಳಂ ಮಿಸುಗೆ ಸಿದ್ಧೇಶ್ವರನ |
ಪಾರಸೈನ್ಯಂ ನಡೆದುದಮಮ ಬಿಣ್ಪಿಂಗೆ ಶೇ |
ಷೋರಗನ ಪೆಡೆ ಬಗ್ಗೆ ದಿಗಿಭಮೆಂಟುಂ ಮುಗ್ಗೆ ಕಮಠನಪರಾಂಗ ತಗ್ಗೆ ||೫||

ಅಲ್ಲಿಗಲ್ಲಿಗೆ ಪಾಳೆಯಂಬಿಡುತೆ ಶಿವಯೋಗಿ |
ವಲ್ಲಭಂ ನಿಷ್ಕಾಮ ನಿರುಪಮಂ ನಿಶ್ಚಲಿತ |
ನಲ್ಲೀಲೆಯಿಂ ತೆರಳಿಬಂದು ಹಾವಿನಹಾಳೆನಿಪ್ಪಗ್ರಹಾರದೆಡೆಗೆ ||
ಕಲ್ಲಿನಾಥನ ಶಿವಾಲಯದ ಬಾಗಿಲ ಮುಂಬಿ |
ನಲ್ಲಿ ಗುಡಿಗೂಡಾರಮಂ ಪೊಯ್ಸಿಯುತ್ಸವಂ |
ಪಲ್ಲೈಸಲೊಪ್ಪುತಿರ್ದ್ದಂ ಮಿಸುನಿಗಾಲ್ಮಣೆಯ ಗದ್ದುಗೆಯೊಳಿಂಬುಗೊಂಡು ||೬||

ಗುರುನಾಥನಿಂತು ಕುಳ್ಳಿರ್ದ್ದ ವೇಳೆಯೊಳು ಶಿವ |
ಶರಣಾಗ್ರಗಣ್ಯನುನ್ನತ ಪುಣ್ಯಶೀಲನ |
ಚ್ಚರಿಯನೊದವಿಪ ಭಕ್ತಿವಂತ ನುರುಮುಕ್ತಿಕಾಂತಂ ಕಲ್ಲಿನಾಥನೆಂಬ ||
ಪರಮಪುರುಷನು ತತ್ಪುರದ ಭಕ್ತವಿತತಿಯೊಡ |
ವೆರಸಿ ಕಾಣಿಕೆಯಿತ್ತು ಸಾಷ್ಟಾಂಗದಿಂದಿಳೆಗೆ |
ಹರಹಿ ತನುವಂ ನಮಸ್ಕರಿಸಿ ರಕ್ಷಿಪುದೆಂದು ಕೈಮುಗಿದು ನಿಂದಿರ್ದನು ||೭||

ಸ್ಫುರಿತಕರುಣಾಪಾಂಗದಿಂ ನೋಡಿ ಕರೆದು ಹ |
ತ್ತಿರೆ ನೊಸಲಿನೊಳ್ಬಸಿತವಿಟ್ಟು ಬಳಿಕಾ ಮಹೇ |
ಶ್ವರಭಕ್ತರೆಲ್ಲಗ್ಗೆ ಸಂತೋಷಮಂ ಬೀರಿ ಸನ್ನಿಧಿಯೊಳೆಡೆವಡಿಸಲು ||
ಶರಣೆಂದು ಕಲ್ಲಿದೇವಂ ಬಿಜಯಮಾಳ್ಪುದೀ |
ಹರನಿವಾಸಕ್ಕೆಂದು ಕೊಂಡೊಯ್ದು ಗದ್ದುಗೆಯೊ |
ಳಿರಿಸಿ ಸಕಲೋಪಚಾರಂಗಳಂ ರಚಿಸಿದಂ ದೇಶಿಕಾಗ್ರೇಸರಂಗೆ ||೮||

ಬಳಿಕ ಕಿಂಕರಭಾವಮಂ ತಳೆದು ದಿವ್ಯಗುರು |
ಕುಲತಿಲಕ ಚಿತ್ತಯಿಪುದೀ ಕಲ್ಲಿನಾಥನಂ |
ಸಲವುಕಾಲಂ ಪಿಂತೆ ಪೂಜಿಸುತ್ತಿರಲೊಂದುದಿನ ಮರ್ಚಿಸುವ ಪದದೊಳು ||
ಬಲುರುಣಿ ಮಹೋಗ್ರತೆಯೊಳಾಡೆ ಶಂಕಿಸದಾನು |

ಚಲಿಸದಿರಲದು ಮೃತಿಯುನೆಯ್ದೆ ಕಂಡಿದರಸುವ |
ಸಲಹಬೇಕೆಂದು ಬಿನ್ನೈಸೆ ಜೀವಂಬಂದುದದಕೆ ಶಿವಕರುಣದಿಂದೆ ||೯||
ಮಗುಳ್ದಾನು ಕಲ್ಲಿನಾಥೇಶಲಿಂಗಕ್ಕೆ ಕೈ |
ಮುಗಿದೆನಗೆ ಮುಕ್ತಿರಾಜ್ಯಶ್ರೀಯ ಪಾಲಿಸುವ |
ಜಗದಾದಿದೇಶಿಕನ ತೋರಯ್ಯ ಎಂದು ವಿಜ್ಞಾಪನಂಗೆಯ್ಯಲೊಡನೆ ||
ಒಗುಮಿಗೆಯ ಕೂರ್ಮೆಯಿಂದಂ ಕಂದ ಕೇಳೆಮ್ಮ |
ಮಗನು ಸಿದ್ಧೇಶ್ವರನು ಬಂದು ಬೋಧಿಪನಂದು |
ನಿಗಮಾಂತವಾಕ್ಯಾರ್ಥಪದವಿ ಸಿದ್ಧಿಪುದೆಂದನದು ದೃಷ್ಟವಾದುದೆಂದಂ ||೧೦||
ಕೇಳಾದೊಡಣುಗ ಕಲ್ಲಯ್ಯ ಶಿವತತ್ತ್ವದ ವಿ |
ಶಾಲವ ನದಾದಿಯೊಳು ನಿರ್ದ್ವಂದ್ವ ಪರಶಿವನ |
ಲೀಲೆಯಿಂ ದೀಶಾನನೀಶ್ವರ ಮಹೇಶರುದ್ರ ಸದಾಶಿವರು ಜನ್ಮಿಸಿ ||
ಮೂಲೋಕಮಂ ಸೃಷ್ಟಿಸುವ ಪೊರೆವ ಸಾಮರ್ಥ್ಯ |
ದೇಳಿಗೆಯನಿತ್ತಜಾಚ್ಯುತರ ಸೃಷ್ಟಿಸಿದರವ |
ರೀಲೋಕದುದಯಮಂ ಸ್ಥಿತಿಯನೊದಗಿಪರೆಂದನಾ ಶೈವದೀಕ್ಷಾಗುರು ||೧೧||
ಪರಶಿವನ ಕುಡಿನೋಟದಿಂ ಪರಾಶಕ್ತಿ ಯುವ |
ತರಿಸಿ ಸೃಜಿಸಿದಳಾದಿಶಕ್ತಿಯಂ ಬಳಿಕಲಾ |
ವರಶಕ್ತಿಯಿಂದಲಿಚ್ಛಾಶಕ್ತಿಯಾದಳಾಶಕ್ತಿಯಿಂ ಜ್ಞಾನಶಕ್ತಿ ||
ದೊರೆಕೊಂಡಳಾಕೆಯಿಂದಂ ಕ್ರಿಯಾಶಕ್ತಿ ಸಂ |
ಸ್ಫುರಿಸಿದಳು ಪಂಚಶಕ್ತಿಗಳಾದರಿಂತೆಂದು |
ಗುರು ನಿರೂಪಿಸಿದನಾ ಕಲ್ಲಿದೇವಂಗೆ ಸದ್ಭಾವಂಗೆ ಪರಿಮಿತದೊಳು ||೧೨||
ಪರಶಿವನಿನೀ ಪಂಚಶಕ್ತಿಯುಂ ಕಾರಣೇ |
ಶ್ವರರೈವರುಂ ಸಮುದ್ಭವಿಸಿ ಬಗೆಗೊಳಿಸಿದರು |
ಪರಿಕಿಪ್ಪೊಡವರೊಳು ಸದಾಶಿವನ ದಿವ್ಯಪಂಚಬ್ರಹ್ಮದಂಶದಿಂದೆ ||
ಧರಣಿಜಲಶಿಖಿ ಪವನಗಗನ ಹಿಮಕಿರಣ ಸರ |
ಸಿರುಹ ಮಿತ್ರಾತ್ಮರೆಂದೆನಿಪಷ್ಟಮೂರ್ತಿ ಯುವ |
ತರಿಸಿ ತೋರಿತಜಾಂಡವಾಗಿ ಸಂಸ್ಥೂಲರೂಪದಿ ನೆಂದನಾಚಾರ್ಯನು ||೧೩||
ಪುಂಡರೀಕ ಭವಾಂಡಕೋಟಿ ಯಿಂತಾದುದೀ |
ಪಿಂಡಕೋಟಿಯು ಮಮೃತಕರಧರನ ಪಂಚಮುಖ |

ಮಂಡಲದಿನುತ್ಪತ್ತಿಯಾದ ತತ್ತ್ವಂಗಳಿಂ ಸಂಭವಿಸಿತೆಂದು ಪೇಳೆ ||
ಅಂಡಕೋಟಿಯೊಳು ತೋರ್ಪಂತೆ ಕಾಣಿಪುದೆಂತು |
ಪಿಂಡಕೋಟಿಯೊಳು ತತ್ತ್ವಂಗಳದನರಿಪೆಂದು |
ಖಂಡಪರಶಿವನಾತ್ಮಜಾತನಂ ಮಗುಳ್ದು ಬೆಸಗೊಂಡನಾ ಕಲ್ಲಯ್ಯನು ||೧೪||

ನರ ರೋಮ ವಸ್ಥಿ ಮಾಂಸಂ ಚರ್ಮ ವೆಂಬಿನಿತು |
ಧರೆಯಂಶ ಮೂತ್ರ ರುಧಿರಂ ಸ್ವೇದ ಮಜ್ಜೆಯುಂ |
ಸ್ಮರರಸಂ ಸಲಿಲಾಂಶ ವಾಲಸ್ಯ ನಿದ್ರೆ ನೀರಳ್ಕೆ ಪಸಿ ವತನುಚೇಷ್ಟೆ ||
ಮರುದಾಪ್ತನಂಶ ಪಾರುವ ಸುಳಿವ ಕಂಪಿಸುವ |
ಪರಿವ ಬೆದರುವ ಗುಣ ಮಿವೆಲರಂಶ ವೆಸೆವಹಂ |
ಕರಣ ರಾಗ ದ್ವೇಷ ಲೋಭ ಮೋಹಂಗಳಾಗಸದಂಶ ಕೇಳೆಂದನು ||೧೫||

ತಿಂಗಳ್ಗೆ ನೇಸರ್ಗೆ ಸಂಚರಿಪ ಪಥ ಮಿಡಾ |
ಪಿಂಗಳಗಳೆನಿಪ ನಾಡಿಗಳೆ ಪರಮಾತ್ಮಕಳೆ |
ಪಿಂಗದ ಪರಬ್ರಹ್ಮದಂಶವೀ ಯಷ್ಟಮೂರ್ತಿಗಳು ಶಿವನಿಂದಾದುವು ||
ಲಿಂಗಮಧ್ಯೇಜಗತ್ಸರ್ವಮೆನುತಿದೆ ಶ್ರುತಿ ಬೆ |
ಡಂಗಿನಿಂದಿದ ನರಿವುದೆಂದು ಬೋಧಿಸಿದ ನಾ |
ತಂಗೆ ಸಿದ್ಧೇಶ್ವರನು ಶಿವಯೋಗಿಶೇಖರನು ಲಿಂಗತೇಜಃಪ್ರಸರನು ||೧೬||

ಪರಮಾತ್ಮಕಲೆಯೇ ಪರಬ್ರಹ್ಮದಂಶವೆಂ |
ದಿರಿ ದೇವ ಜೀವಪರಮರ ಭೇದವಾವುದದ |
ನೊರೆಯಿಮನೆ ಶಿವತತ್ತ್ವಮಂ ತಿಳಿಯದಜ್ಞಾನದಿಂ ಪಾಶಬದ್ಧನಾದ ||
ನರನೆ ಜೀವಾತ್ಮ ನೀಶ್ವರಭಕ್ತಿ ವಿಶ್ವಾಸ |
ದೊರೆಕೊಂಡ ಸಾತ್ವಿಕನೆ ಪರಮಾತ್ಮನೆಂದು ಸ |
ದ್ಗುರು ನಿರೂಪವನಿತ್ತನಾ ಕಲ್ಲಿದೇವಂಗೆ ಕರತಳಾಮಲಕಮಾಗಿ ||೧೭||

ಬೆಸಸಿದಿರಿ ದೇವ ನೀವಂಡಪಿಂಡಂಗಳುದ |
ಯಿಸಿದ ಪರಿಯನು ತದಾತ್ಮಕವಾದ ಘನತತ್ತ್ವ |
ವಿಸರವನು ಲೇಸಾಗಿ ಕಾಣ್ಬಂತೆ ಯೆನಗಿನ್ನು ಮುಂದೆ ವಿವರಿಸವೇಳ್ಪುದು ||
ಪಸಿವು ನೀರಳ್ಕೆ ಮೊದಲಾದುವಂ ತೊರೆದು ಜೀ |
ವಿಸಿ ದಿವ್ಯಯೋಗಿಗಳು ಪಲಕಾಲ ವರ್ತಿಪರು |
ಶಶಿಧರನ ನೆದೆವನೆಯೊಳೆಂಬರೆಂತೆನೆ ಗುರುಕುಲಾಧೀಶನಿಂತೆಂದನು ||೧೮||

ಎತ್ತಿ ಮೂಲಾಧಾರಪವನನಿಂ ತೇಜಮಂ |
ಪೊತ್ತಿಸಿ ತದೀಯವಿಪುಳಜ್ವಾಲೆ ಸ್ವೈವರಿದು |

ಚತ್ತಲದ ನುತ್ತಮಾಂಗದ ಸಾಸಿರೆಸಳ ಪದ್ಮದಿನೊಸರ್ದು ಸುರಿವಮೃತವ |
ಚಿತ್ತದಿಂ ಪ್ರಾಣಲಿಂಗಕೆ ನಿವೇದಿಸಿ ಯದಂ |
ತತ್ತು ಗೊಂಡಚಲಸುಖದಿಂದಿಹುದೆ ಭಾವಿಪೊಡೆ |
ಸತ್ತಿನಸುಚಿತ್ತಿನಾನಂದದೊಡವೆರಕೆಯಿದು ಯೋಗಸುಖವೆಂದರಿಹಿದಂ ||೧೯||

ಕರುಣಿಸಾ ಭೇದಮಂ ರೇವಣಾಸಿದ್ಧೇಶ |
ಗುರುವೆ ಪರತತ್ತ್ವದೊಂದಿರವೆ ಭಕ್ತರಕಲ್ಪ |
ತರುವೆ ಕೈವಲ್ಯಸಾಮ್ರಾಜ್ಯಲಕ್ಷ್ಮೀಮನೋಹರ ಜನನಭಯಪರಿಹರ ||
ವರಕೃಪಾಕರ ಸಮುಲ್ಲಸಿತಕೇಕರಸುಧಾ |
ಕರಕಿರಣಸಮ ಶಾಂತ ನಿರ್ಮಳಸ್ವಾಂತ ಎಂ |
ದೆರಗಿದಂ ಕಲ್ಲಿದೇವಂ ಪೂರ್ವದೇಶಿಕಂಗತ್ಯಂತಭಕ್ತಿಯಿಂದೆ ||೨೦||

ಪೂರಕದ ಕುಂಭಕದ ರೇಚಕದ ಪರಿಗಳಂ |
ತೋರಿ ಪಿರಿದುಂ ವ್ಯಕ್ತವಾಗಿ ಕಾಣಿಸಿ ಷಡಾ |
ಧಾರಚಕ್ರಂಗಳಂ ಪಚ್ಚಿಮಾಧಾರಪಥಮಂ ತೆರಹುಮಾಳ್ಪಂದವಂ ||
ಸೇರಿಸಿ ವಿಲಾಸದಿಂ ದುನ್ಮನಿಯೊಳೊದಗುವ ಸು |
ಧಾರಸಮನಂತರಂಗದ ಲಿಂಗಕರ್ಪಿಸುವ |
ಚಾರುತರಭೇದಮಂ ಕೃಪೆಗೆಯ್ದನಾತಂಗೆ ರೇವಣಾಸಿದ್ಧೇಶನು ||೨೧||

ಗುರು ಕಟಾಕ್ಷದಿನೋಳ್ಪುದೇ ವೇಧದೀಕ್ಷೆ ತ |
ತ್ತ್ವರಹಸ್ಯಮಂ ಬೋಧಿಪುದೆ ಬೋಧದೀಕ್ಷೆ ಶಾಂ |
ಕರಮಂತ್ರಮಂ ಕರ್ಣದೊಳು ಪೇಳ್ವುದೇ ಮಂತ್ರದೀಕ್ಷೆ ಘನತರಲಿಂಗವಂ ||
ಕರತಳದೊಳಿರಿಸುವುದದೇ ಕ್ರಿಯಾದೀಕ್ಷೆ ಯಿ |
ಕೆರದಿಂತುದೀಕ್ಷೆಯೆಂದಾತಂಗೆ ರುದ್ರಮುನಿ |
ವರನಿಂ ಕ್ರಿಯಾದೀಕ್ಷೆಯಂ ಮಾಡಿಸಿದನು ವಿಶ್ವಾತ್ಮಕನು ಸಿದ್ಧೇಶನು ||೨೨||

ಚರಲಿಂಗಮೂರ್ತಿ ಯತಿಕುಲಚಕ್ರವರ್ತಿ ಭಾ |
ಸುರಧವಳತೇಜಃಪ್ರಕಾಶ ಮಂಜುಳಕೀರ್ತಿ |
ಕರುಣಾಬ್ಧಿ ಭಾಳೇಶ ಬೆಸಸಲಾಂ ಪೇಳ್ದ ಸಿದ್ಧೇಶ್ವರಪುರಾಣದೊಳಗೆ ||
ಗಿರಿಜಾತೆಯಾಣ್ಮನಪರಾವತಾರನು ಸಿದ್ಧ |
ಗುರು ಕಲ್ಲಿದೇವಂಗೆ ನಿಜತನುಜರುದ್ರಮುನಿ |
ವರನಿಂ ಕ್ರಿಯಾದೀಕ್ಷೆಯಂ ಮಾಡಿಸಿದ ಕಥನವಿದುವೆ ಪನ್ನೊಂದು ಸಂಧಿ ||೨೩||

೧೧ ನೆಯಸಂಧಿ ಮುಗಿದುದು.



ಶ್ರೀ ಶಂ ಕ ರಾ ಯ ನ ಮಃ.

## ೧೨ ನೆಯ ಸಂಧಿಯು.

ಸೂ|| ಸೊನ್ನಲಾಪುರಿಗೆ ಬಂದಲ್ಲಿ ಚಾಮಲದೇವಿ |
ಯನ್ನೊಡಿ ಶಿವಸಿದ್ಧನುದಯಿಪುದನರಿಪಿ ಭುವ |
ನನ್ನಮಿಸೆ ತಾರಕಾದ್ರಿಯೊಳಿರಿಸಿದಂ ರುದ್ರಮುನಿಪನಂ ಸಿದ್ಧೇಶನು ||

ಪಾಲ್ಗಡಲ ಮಗಳ ಕಾದಲನ ತೊಳಗುವ ಕಣ್ಮ |
ಲಲ್ಗಿಕ್ಕೆಯೆನಿಸುವಡಿದಾವರೆಯ ಕಮ್ಮೊನೆಯ |
ಲಲ್ಗೈದುಗಾರನದಟೆಂಬ ಪಾಸರೆಗಲ್ಗೆ ಕುಲಿಶದುಳಿ ಯೆಂದೆನಿಸುವ ||
ಬಲ್ಗೈತನದ ಸೊಬಗ ನೆಲನೀರಗಿನಿಪೇರೆ |
ಲಲ್ಗಾಳಿವಟ್ಟೆಸಸಿಬಿಸುಗದಿರರಾತುಮನೊ |
ಡಲ್ಗೊಂಡ ಮೂರುತಿಯೆ ಸಲಹೆಮ್ಮ ಶಾಂತಮಲ್ಲಯ್ಯ ಮೂಲೋಕದಯ್ಯ ||೧||

ಶ್ರೀರೇವಣಾರಾಧ್ಯದೇವರ ವಿಚಿತ್ರಲೀ |
ಲಾರಸಮನಾ ಮಹಾಪ್ರಮಥಗಣನಾಥನ ಕು |
ಮಾರನಹ ರುದ್ರಮುನಿವರನೆಸಕಮಂ ಸಿದ್ಧರಾಮನುದಯಿಪ ಕಥನಮಂ ||
ಸೂರಿಗಳು ಪಾವನಾಚಾರಿಗಳು ಶಿವಮತವಿ |
ಚಾರಿಗಳು ಸಲೆ ನಿರ್ವಿಕಾರಿಗಳು ಸಂವಿದಾ |
ಕಾರಿಗಳು ಲಾಲಿಸುವುದೀಕಾವ್ಯದೊಳು ನವ್ಯದೊಳು ಶರಣಸೇವ್ಯದೊಳಗೆ ||೨||

ಬಳಿಕಕಲ್ಲಯ್ಯನಿಂ ಬೀಳ್ಕೊಂಡು ಕುರುಮಗಧ |
ಮಲೆಯಾಳ ನೇಪಾಳ ಪಾಂಚಾಳಚೋಳಕುಂ |
ತಳ ಪಾರಿಯಾತ್ರ ಕಾಶ್ಮೀರ ಮೊದಲಾಗಿರ್ದ್ದ ಛಪ್ಪನ್ನದೇಶದೊಳಗೆ ||
ಸುಳುಹು ಪಾವನಮೂರ್ತಿ ಚರಿಸಿದನು ರುದ್ರಮುನಿ |
ತಿಲಕನೊಡಗೂಡಿ ಸಿದ್ಧೇಶ್ವರನು ಸಂಭ್ರಮದೆ |
ದಳವಾಡ ವೋಲೈಸಿಬರೆ ರಾಜವಿಭವಸಹಿತಂ ಲಿಂಗಲೀಲೆಯಿಂದೆ ||೩||

ಸಕಲದೇಶಂಗಳೊಳಗಿಂತು ಸಂಚರಿಸಿ ಯೋ |
ಗಿಕದಂಬಶೇಖರಂ ರೇವಣಾಸಿದ್ಧಪತಿ |
ಯಕಳಂಕವೈಭವಸಮುನ್ನತಂ ಬರಲಿದಿರೊಳಭಿರಾಮವಾಗಿರ್ದ್ದುದು ||
ಮಕರತೋರಣ ತಳಿಗೆದೋರಣದ ಸಾಲ್ಗಳಿಂ |
ಮುಕುರತೋರಣ ನಿಚಯದಿಂದೆ ಮಾಂಗಲ್ಯಸು |
ಪ್ರಕಟಿತಂ ಸೊನ್ನಲಾಪುರವೆಂಬ ಪೊಳಲು ಮಾಯಾಂಗನೆಗೆ ಕಣ್ಣುದೊಳಲು ||೪||

ಪರಿಕಿಪೊಡೆ ಪುಣ್ಯಜನಕಪಿತವಾ ದ್ವಾರಕಾ |
ಪುರಿ ಕಾಂಚಿಯೇ ಜಘನ್ಯವೆನಿಪ್ಪ ಪೆಸರೊಡಂ |
ವೆರಸಿತ್ತು ಹಸ್ತಿನಾನಗರಿ ದುರ್ಯೋಧನಕ್ರೀಡೆಗಾಸ್ಪದವಾದುದು ||
ಸರಿಯಾದ ಪೊಳಲಾವುದಿಳೆಯೊಳೆನಗೆಂದು ನಗು |
ವರವಿನಂತಿರೆ ಸೊದೆಯ ಬೆಳ್ಪೆಳಗು ಸೊನ್ನಲಾ |
ಪುರದ ಬಾಗಿಲ್ವಾಡದುಪ್ಪರಿಗೆ ಯೊಪ್ಪುತಿರ್ದ್ದುದು ಬೆಳ್ಳಿವೆಟ್ಟಿನಂತೆ ||೫||

ಪೊಳಲ ಬಾಗಿಲ್ವಾಡದುಪ್ಪರಿಗೆಯಂ ಕಂಡು |
ಘಳಿಲನಿಳಿದಡರ್ದ ಪಟ್ಟದ ಭದ್ರಗಜದಿಂದೆ |
ಪಳುಕುವಾವುಗೆಯ ತಂದಿಟ್ಟೊಡದನೊಲ್ಲದೆ ಚಿದಾನಂದ ಸುಚರಿತ್ರನು ||
ಅಳಿಕನೇತ್ರನು ಸಿದ್ಧಶಿವಯೋಗಿ ನಡೆತಂದ |
ನಿಳೆಗಿದಚ್ಚರಿಯೆನಲು ರುದ್ರಮುನಿಪತಿಯ ಕರ |
ತಳವ ಪಿಡಿದತ್ಯಧಿಕಭಕ್ತಿಯಿಂ ಸೈನ್ಯವಿಕ್ಕೆಲದೊಳೋಲೈಸಿ ಬರಲು ||೬||

ಅನಸೂಯೆ ಸತ್ಯವತಿ ಸುಚರಿತ್ರೆ ಯೆಂದೆನಿಪ |
ವಿನುತವಧುಗಳ್ಗೆ ಪಾಸಟಿಯಾಗಿ ಪೆಸರ್ವಡೆದು |
ಮುನಿಜನವ ನಾರಾಧಿಸುತ್ತಿಹಳ್ತತ್ಪುರದ ಶರಣಾಗ್ರಗಣ್ಯೆಯೆನಿಪ ||
ವನಿತೆ ಚಾಮಲದೇವಿ ಸೌರಂಭದಿಂ ಸುವಾ |
ಸಿನಿಯರೊಡಗೂಡಿ ಪೊಸಮುತ್ತಿನಾರತಿವೆರಸಿ |
ವಿನಯಭಯಭಕ್ತಿಯಿಂ ವಂದಿಸಿದಳಿದಿರ್ವಂದು ಗುರುಕುಲಾಂಬುಜಭಾನುಗೆ ||೭||

ಪರಸಿ ಭಸಿತವನಿಟ್ಟು ಮಧುರೋಕ್ತಿಯಿಂದೆ ಸ |
ತ್ಕರಿಸೆ ಚಾಮಲದೇವಿ ಕಯ್ಯಮುಗಿದಿಂತಿದ |
ಚ್ಚರಿದೇವ ಪಟ್ಟಗಜದಿಂದಿಳಿದು ಪಾದಚಾರದೊಳೆ ನೀವ್ಯೆತಪ್ಪುದು ||
ಕರುಣಿಸಿಂತೀಬಗೆಯ ನೆಂದೆನಲು ಸುಜ್ಞಾನ |
ವರಚಕ್ಷು ವಿಶ್ರುತ ಮುಮುಕ್ಷು ಸಿದ್ಧೇಶನಾ |
ತರುಣಿಯೊಳು ಪೇಳಲುಜ್ಜುಗಿಸಿದಂ ಗುಜ್ಜುಮೆಟ್ಟುತ್ತ ತಿವಿಲಾಸದಿಂದೆ ||೮||

ಕೇಳು ಚಾಮಲದೇವಿ ಯಿಪೊಳಲೊಳಭಿನುತ ಸು |
ಶೀಲೆ ಮೊರಡಿಯ ಮುದ್ದಗೌಡನರ್ಧಾಂಗಿಯಾ |
ಲೋಲಾಕ್ಷಿಯುದರದಿಂ ಪರಮಶಿವಯೋಗಿ ಸಂಭವಿಸಿದಪನಾತಗೊಲಿದು ||
ಕೈಲಾಸಪರ್ವತಕೆ ಪಾಸಟಿಯೆನಿಪ್ಪ ಸಿರಿ |
ಶೈಲದಿಂ ಮಲ್ಲಿಕಾರ್ಜುನಲಿಂಗ ನತುಳಸ |
ಲ್ಲೀಲೆಯಿಂದೈತಂದು ನೆಲಸಿದಪನೀ ಸ್ಥಳದೊಳೆಂದು ಗುರುವರನುಸಿರ್ದನು ||೯||

ಸಕಲ ತೀರ್ಥಂಗಳುಂ ಸಕಲ ದೇವರ್ಕಳುಂ |
ಸಕಲ ಋಷಿಗಳುವೊಂದುಗೂಡಿ ಬಂದಿಲ್ಲಿ ವಿ |
ಶ್ವಕುಟುಂಬಕಂ ತರಣಿ ಶಶಿಹುತವಹಾಂಬಕಂ ಶ್ರೀಲಿಂಗಚಕ್ರವರ್ತಿ ||
ಯುಕುತಿಗತಿದೂರ ನಾಮ್ನಾಯಸಾರಂಸಮು |
ಚ್ಚುಖದಿನುಮೆವೆರಸಿ ಬಂದಿಲ್ಲಿ ನೆಲಸಿದಪನೆಂ |
ದಕುಟಿಲಚರಿತ್ರ ನೀಶ್ವರಪುತ್ರ ನೊರೆದನಾ ಭಕ್ತಿಸಂಪನ್ನೆಯೊಡನೆ ||೧೦||

ದೇವ ಗುರು ಚಿತ್ತಯಿಪ್ಪುದರುವತ್ತುವತ್ಸರಂ |
ತೀವಿತಾ ಲಲನೆಗೆಂತಣುಗನಂ ಪಡೆದಪಳಿ |
ದೋವೊ ಸೋಜಿಗವೆಂದು ಮೂಗಿನೊಳ್ಬೆರಲಿಟ್ಟು ತಲೆದೂಗಿ ಚರಣಕೆರಗಿ ||
ನೀವಿದರ ವೃತ್ತಾಂತಮಂ ನಿರೂಪಂಗೆಯ್ದು |
ಪಾವನಂಮಾಳ್ಪುದೆಂದಳ್ಕರಿಂ ಬಿನ್ನಯಿಸ |
ಲೋವಿ ಕರುಣಾರಸಂಗರೆದು ಚಾಮಲದೇವಿಯೊಡನೆ ಬಳಿಕೆಂತೆಂದನು ||೧೧||

ಮುನ್ನ ವೊರಡಿಯ ಮುದ್ದುಗೌಡನುಂ ತತ್ಸತಿಯು |
ಮೆನ್ನರೆನೆ ಗಾಂಧರ್ವ ದಂಪತಿಗಳೀಶನ ಪ್ರ |
ಸನ್ನನೋಲಗದ ತೇಜಸ್ಥರಿವ ರಭವನೋಲಗಕೆ ಪೋಗುತ್ತಿದಿರೊಳು ||
ಸನ್ನುತ ಶಿಲಾದನ ಕುಮಾರನಂ ಮಾಯೆಯಂ |
ಪನ್ನತಿಕೆಯಿಂ ಗೆಲ್ದ ಧೀರನಂ ಭೃಂಗೀಶ |
ನನ್ನೋಡಿ ಗಹಗಹಿಸಲಾತನಿಳೆಯೊಳು ಜನಿಸಿಮೆಂದು ಶಾಪವನಿತ್ತನು ||೧೨||

ಶಾಪಸ್ಥರಾಗಿ ಗಾಂಧರ್ವದಂಪತಿಗಳು ವಿ |
ಶಾಪವೆಂದೆಮಗಪ್ಪುದೆಂದು ಬಿನ್ನಯಿಸಿಪೊಡೆ |
ತಾಪತ್ರಯಾಪಹರ ತಾಂ ದಿವ್ಯಯೋಗಿಸುತನಾದಪಂ ಮುಂಡೆ ನಿಮಗೆ ||
ಆಪುಣ್ಯದಿಂ ನೀವು ಕೃತಕೃತ್ಯರಪ್ಪಿರಿ ವಿ |
ಶಾಪ ಮುಂದಪ್ಪುದೆಂದಿಳೆಗೆ ಬೀಳ್ಕೊಟ್ಟನು ಮ |
ಹಾಪುರುಷ ಭೃಂಗೀಶನಿವರನೆಂದುಸಿದಂ ಸಿದ್ಧೇಶನಾ ಸತಿಯೊಳು ||೧೩||

ಎಂದು ಪೇಳುತ್ತಂದು ನಡೆತಂದು ಸುಗ್ಗಲೆಯು |
ಮಂದಿರಕೆ ಕರೆದಾ ಮಹಾಸತಿಯ ಜಠರಕ್ಕೆ |
ವಂದಿಸಿ ತದಂಗನೆಯ ಕರತಳದ ಭಿಕ್ಷೆಯಂ ಕೊಂಡು ಜಗದಾರಾಧ್ಯನು ||
ಹಿಂದೆರಳ್ತಿಂಗಳಿಂದಂ ಮೇಲೆ ಜನಿಯಿಪಂ |
ನಂದನಂ ಶಿವಯೋಗಿ ಕುಲಲಲಾಮಂ ಕಾಲ |
ಕಂದರ್ಪರಂ ಗೆಲ್ವ ನಿಸ್ಸೀಮನಾ ಸಿದ್ಧರಾಮನೆಂದೆಚ್ಚರಿಸಿದಂ ||೧೪||

ಸುಗ್ಗಲಿಗೆ ಮುಂದಪ್ಪ ಶುಭವ ಸೂಚಿಸುತಿಂತು |
ವೆಗ್ಗಳಿಸೆ ಪಂತೋಷವೆಳ್ತಂದು ಶಿವತತ್ತ್ವ |
ದುಗ್ಗಡದ ಪದವಿಯಂ ಸಲಹಿ ಚಾಮಲದೇವಿಗಣುಗನಂ ತೋರಿಕೊಟ್ಟು ||
ಒಗ್ಗುಗೆಡದಿರ್ದ್ದ ಪಡೆವೆರಸಿ ಶಿವಸಿದ್ಧಪತಿ |
ಯಗ್ಗಳಿಕೆ ಮಿಗೆ ತೆರಳ್ದಂ ಪೊಯ್ವ ಭೇರಿಗಳ |
ಲಗ್ಗೆ ಮಿಗೆ ಗರ್ವಿಸುವ ವಾದಿಸಂದೋಹದೆದೆ ಜಗ್ಗನೆ ಜರಿದು ಬೆದರಲು ||೧೫||

ಪರಮಗುರು ರೇವಣಾಸಿದ್ಧಪತಿ ರುದ್ರಮುನಿ |
ವೆರಸಿ ಸಂಭ್ರಮವೊದಗೆ ನಡೆತಂದು ಸೊನ್ನಲಾ |
ಪುರವ ಪೊರಮಟ್ಟು ಚಾನಮಲದೇವಿಯರನೆ ಬೀಳ್ಕೊಟ್ಟು ಘನಕೃಪೆಯ ಬೀರಿ ||
ಧರೆಯೊಳಿಹ ಕುಲಗಿರಿಗಳೆಲ್ಲಕ್ಕೆ ಮಿಾಟಾದ |
ಸುರುಚಿರ ಶ್ರೀಪರ್ವತಾಶ್ರಮವನೆಯ್ದಿದಂ |
ಪರುಸಮಂ ವಿಮಳಚಿಂತಾರತ್ನಮೈದುವಂತಿರೆ ಚಿದ್ವಿಲಾಸದಿಂದೆ ||೧೬||

ಹೊಸಮಿಸುನಿವಣ್ಣಮಂ ತಳೆದ ರಾಯಂಚೆಗಳ |
ವಿಸರಮಂ ಮಾಣಿಕದ ಬಣ್ಣಮಂ ತಾಳ್ದ ರಾ |
ಜಿಸುವ ಗಿಳಿವಿಂಡುಗಳ ಚೊಕ್ಕಬೆಳ್ಳಿಯ ಬಣ್ಣಮಂ ತಳೆದು ಕಣ್ಗೆ ಸೊಗಸಂ ||
ಎಸಗುತಿಹ ಕೋಕಿಲಂಗಳ ಪಂಗ್ತಿಗಳನು ತೋ |
ರಿಸಿ ರುದ್ರಮುನಿಪತಿಗೆ ಬೆಳ್ಳಾನೆಗಳನು ಸುರ |
ಪಶುಗಳನು ಕಲ್ಪವೃಕ್ಷಂಗಳನು ಕಾಣಿಸಿದನಾ ಸಿದ್ಧಯೋಗೀಂದ್ರನು ||೧೭||

ಸಾವಿರಭುಜದ ಶರಭ ಶತಮುಖದ ಶಾರ್ದೂಲ |
ಮೂವೆರಲ್ಕೊಗದೆರಳೆ ನಾಲ್ಕೊಗದ ಶೋಣದಂ |
ಶಾವಳಂ ಕುಂಕುಮಚ್ಛಾಯೆವಡೆದಮ್ಮಾವು ಪಳುಕಿನಂದದ ಕೇಸರಿ ||
ದಾವಶಿಖಿಯಂತಿಪ್ಪ ಭಲ್ಲೂಕ ತೀವಿರ್ದ್ದ |
ಪಾವನಕ್ಷೇತ್ರದೊಳು ಹಿಂಡುಹಿಂಡಾಗಿ ಲಿಂ |
ಗಾವಧಾನಿಗಳರಸ ಸಿದ್ಧಪತಿ ಯನಿತುಮಂ ಕುವರಂಗೆ ತೋರಿಸಿದನು ||೧೮||

ಸಾಮಗಾನಂಗೆಯ್ವ ಕಿನ್ನರ ಮೃಗಂಗಳು |
ದ್ದಾಮನೃತ್ಯವನೊಡರ್ಚುವ ಪೆರ್ಮವೆತ್ತ ಗಂ |
ಡಾಮೃಗಂಗಳು ನಡೆವ ಬಲ್ಸುಂಡುಗಳ್ನುಡಿವ ಬಲ್ಮರಂಗಳು ನಗುತಿಹ ||
ಹೇಮಲತೆಗಳು ನಭಕೆ ಧೀಂಕಿಡುವ ಗಿಡುಗಳ್ಮ |
ಹಾಮನೋಹರಮಾಗಿ ಕಂಗೊಳಿಸುತಿರ್ದ್ದವಾ |
ಶ್ರೀಮದದ್ರಿಯೊಳವಲ ತೋರಿಸಿದನಾತ್ಮಜಾತಂಗೆ ಪಣೆಗಣ್ಣಾರ್ಯನು ||೧೯||

ಪಂಚರತ್ನದ ಕಣಿಗಳಿಂ ಪವಿಯ ಕಣಿಗಳಿಂ |
ಕಾಂಚನದ ಕಣಿಗಳಿಂ ತಾಮ್ರಖನಿಗಳಿ ನಷ್ಟ |
ಕಂಚುಗಣಿಗಳಿ ನಮಳತರವೆನಿಸಿ ರಾರಾಜಿಸುವ ಸಿದ್ಧರಸದೀವಿದ ||
ಬೆಂಚೆಗಳಿ ನಳಿವುನರೆತೆರೆಯರೆತ ಚೆಂಚರಿಂ |
ಚಂಚಿತಿಯರಿಂ ದೇವಪುರುಷರಿಂ ಋಷಿಗಳಿಂ |
ದಂ ಚೆಲ್ವುವೆತ್ತ ಪರ್ವತದ ಪೆಂಪಂ ತೋರಿದನು ಸುತಂಗಾಚಾರ್ಯನು ||೨೦||

ಸಿರಿಯೊಣ್ಮನರ್ಚಿಸಿದ ಕಮಲಭವ ಪೂಜಿಸಿದ |
ಸುರಪತಿ ಸಮಾರಾಧಿಸಿದ ಸಿದ್ಧವಿದ್ಯಾಧ |
ರರು ಗರುಡಗಾಂಧರ್ವ ಯಕ್ಷಕಿನ್ನರರು ಕಿಂಪುರುಷರೊಲವಿಂ ಭಜಿಸಿದ ||
ಪರುಸಲಿಂಗಂಗಳ ನಯಸ್ಕಾಂತಲಿಂಗಪ್ರ |
ಕರಮ ನಮೃತಾಂಶು ಮಣಿಮಯಲಿಂಗಗಳ ಸಿದ್ಧ |
ಗುರು ತೋರಿದಂ ತನೂಜಂಗಧಿಕತೇಜಂಗೆ ಕಾದಲ್ಮೆ ಕೈಗಣ್ಮಲು ||೨೧||

ಉದಯತಾಳದ್ರುಮವನೇರಿ ನೇಸರಮಂಡ |
ಲದ ಪೊರೆಗೆ ಪೋಗಿ ವಂದಿಸಿಕೊಂಡು ತಿರುಗಿ ಸಂ |
ಮುದದಿಂದೆ ಮೋಹಿನೀಗಜವನಡರ್ದಿಳಿದು ಕತ್ತರಿವಾಣಿಯೆಡೆಗೆ ಬಂದು ||
ಪುದಿದಿರ್ದ್ದ ಗರಳಮಂ ಸಕಲಜನಕಮರ್ದುಗೈ |
ದದನಿತ್ತು ವಜ್ರಲೇಪದ ಶಿಲೆಯ ಮೆಟ್ಟಿ ನಡೆ |
ದದಟನಿಂ ಬಿನದಿಸಿದನಣುಗನಿದಿರಿನೊಳಲ್ಲಿ ರೇವಣಾಸಿದ್ಧೇಶನು ||೨೨||

ಧರಿಸಿ ಪಾಪಿಯಕೂಸ ನುರುಬಿಲದ್ವಾರದೊಳು |
ಸರಸರಿಸಿ ರುದ್ರಮುನಿಪತಿವೆರಸಿ ಪೊಕ್ಕು ಸರ |
ಸಿರುಹಗರ್ಭನ ಲೋಕವನು ವಿಷ್ಣುಲೋಕಮಂ ರುದ್ರೇಶ್ವರರ ಲೊಕವಂ ||
ವರಸದಾ ಶಿವಲೋಕಮಂ ತೋರೆ ಯಾತಂಗೆ |
ಚಿರಮಪ್ಪ ಸೌಖ್ಯಮಂ ಬೀರಿ ತದ್ದ್ವಾರದಿಂ |
ಮರಳಿ ತಾರಕಗಿರಿಯ ಪುಣ್ಯಾಶ್ರಮವನೈದಿದನು ಶೈವದೀಕ್ಷಾಗುರು ||೨೩||

ಸುರಧೇನುಗಳು ಕರೆವ ಕೀಲಾರ ವಲ್ಲಿರ್ದ್ದ |
ತರುಗಳೆಲ್ಲಂ ಕಲ್ಪವೃಕ್ಷವಾ ಪರ್ವತದ |
ಮೊರಡಿಯೆಲ್ಲಂ ದೇವಮಣಿಯ ಜನ್ಮಸ್ಥಲವೆನಿಪ್ಪುದಾ ತಾಣದಲ್ಲಿ ||
ಇರಿಸಿ ರುದ್ರಮುನೀಂದ್ರನಂ ಸುರನರೋರಗರ |
ನೆರವಿ ಸೇವಿಸುವಂತೆ ಸಕಲ ಸಾಮರ್ಥ್ಯಮಂ |
ಕರುಣದಿಂದಿತ್ತು ಮಂಗಳವಾಡಪಟ್ಟಣಕೆ ತಿರುಗಿದನು ಸಿದ್ಧೇಶನು ||೨೪||

ಎಡೆವಟ್ಟೆಯೊಳು ಕಂಡನಂತ ಶಿಷ್ಯವ್ರಜಕೆ |
ಕುಡುತಭಿಮತಾರ್ಥಫಲಸಿದ್ಧಿಯನು ತಳತಂತ್ರ |
ವೆಡಬಲದೊಳೋಲೈಸಿಬರಲು ನಿಸ್ಸಾಳ ಸೂಳೈಸೆ ಕಹಳೆಗಳೊದರಲು ||
ನಡೆತಂದು ತತ್ಪುರದ ರಾಜಮಂದಿರದೊಳೆಡೆ |
ವಡೆದತ್ಯನೂನ ಶಿವಸಿದ್ಧಾಂತವಲ್ಲಭಂ |
ಮಡದಿಯರೊಳೊಡವೆರಸಿ ಸಂತತಾನಂದ ಸಾಮ್ರಾಜ್ಯಸಂಪದದೊಳಿರ್ದ್ದಂ ||೨೬||

ಅವನತಜನಂಗಳಿಗೆ ಕರುಣಾಕಟಾಕ್ಷದಿಂ |
ಭವಪಾಶಮಂ ಪರಿದು ಕೈವಲ್ಯಲಕ್ಷ್ಮಿಯಂ |
ತವೆ ಕೇಣಿಗೊಟ್ಟು ಶ್ರುತಮಂ ದೃಷ್ಟಮಂ ಮಾಡಿ ಜಗದ ಸಂಶಯವ ಬಿಡಿಸಿ ||
ಪ್ರವಿಮಳ ವಿಚಿತ್ರಚಾರಿತ್ರದಿಂ ವೀರಶೈ |
ವವನುದ್ಧರಿಸಿದ ಯತಿಕುಲಚಕ್ರವರ್ತಿಯಂ |
ಶಿವಸಿದ್ಧರಾಣ್ಮನಂ ರೇವಣಾಚಾರ್ಯನಂ ಬಿಡದೆ ಭಜಿಸುವನೆ ಸುಕೃತಿ ||೨೭||

ಕಂತುಮದಮರ್ದನನು ಕಾಲಮದಭಂಜನನು |
ಶಾಂತಬಾಲೇಶ್ವರನು ಬೆಸಸಲಾಂ ಪರಿರಚಿಸಿ |
ದಿಂತತಿಮನೋಜ್ಞ ಸಿದ್ಧೇಶ್ವರಪುರಾಣದೊಳು ರೇವಣಾಸಿದ್ಧೇಂದ್ರನು ||
ಅಂತುಟೆಂದಿಂತುಟೆಂದುಪಮಿಸಲ್ಬಾರದ |
ತ್ಯಂತಸುಖಮಯವೆನಿಪ ಪರ್ವತಾಶ್ರಮದೊಳೋ |
ರಂತೆ ಕುವರನನಿರಿಸಿದುತ್ತಮಪವಿತ್ರಕಥೆಯಿಂತಿದೀರಾರುಸಂಧಿ ||೨೮||

## ಹನ್ನೆರಡನೆಯ ಸಂಧಿ ಮುಗಿದುದು.



ಓಂ ಶಂಭವೇನಮಃ.

## ಹದಿಮೂರನೆಯ ಸಂಧಿ.

: o :

ಸೂ || ಶಿವಲೋಕದಿಂ ಬಂದ ಪುಷ್ಪಕದಮೇಗಿಟ್ಟು |
ಯುವತಿಯರ ಬೀಳ್ಕೊಟ್ಟು ಕೊಲ್ಲಿಪಾಕಿಗೆ ಬಂದು |
ಶಿವಲಿಂಗದೊಳುಪೊಕ್ಕು ಸಿದ್ಧಗುರು ರೇಣುಕಪ್ರಮಥೇಂದ್ರನಾಗಿರ್ದ್ದನು||

ರತಿಪತಿವಿತತ ತನುಭಸಿತ ಲಸಿತಕಮನವಿಮ |
ಳತರವಪು ಶತಮಖಹುತವಹಶವಿತನಯದನು |
ಜತನುಜಮಕರಗತಿ ನಿರತಪವನಧನದ ಭವವಿನಮಿತ ವೃಷಭಗಮನ ಗಿರೀಶ ||

ಪ್ರತಿರಹಿತಮಹಿಮ ಯತಿತತಿವಿಮತಿವಿಹಿತ ಗಿರಿದು |
ಹಿತೃಸಹಿತ ಮುರಮಥನ ಶತದಳಜಮಕುಟಮಣಿ |
ವಿತತಫಣಿಗಣಪರಿಕಲಿತಪದನಖರ ಶಿವ ಜಯ ಕುಸುಮವಿಚಕಿಲಧವಳ ||೧||

ರಾಜಯೋಗಕ್ಕೆ ಶಿವಯೋಗಕ್ಕೆ ತಾನಲ್ಲ |
ದೀಜಗತ್ತಿನೊಳೊಡೆಯರಿಲ್ಲೆಂಬ ವಿಖ್ಯಾತ |
ತೇಜಮಂ ದಿಕ್ಕುದಿಕ್ಕಿನೊಳು ತೆಕ್ಕನೆ ತೀವಿ ಸುಜ್ಞಾನಸಂಪನ್ನನು ||
ರಾಜಶೇಖರನುನ್ನತಾಭೀಷ್ಟವೀವಮರ |
ಭೂಜನಾ ರೇವಣಾಸಿದ್ಧೇಶ್ವರನು ನಾಡೆ |
ಸೋಜಿಗಮನಾಗಿಸುತೆ ಸುಖದೊಳಿರಲಾ ಸಮಯದೊಳು ವಸಂತಂ ಬಂದುದು ||೨||

ಪುಂಡರೀಕಂ ಪುದಿದ ಸರಸಿಗಳ ಮಧ್ಯದೊಳು |
ಬಂಡುಣಿಗಳೆರಗಿ ಝೇಂಕರಿಸೆ ಮೈಮರೆದು ಸಾ |
ಲ್ಗೊಂಡು ಗಿಳಿವಿಂಡು ಸುಣ್ಮಾತುಗಳನಾಡೆ ಪರ್ವಿದ ಬಳ್ಳಿ ಮಾಮರಗಳ ||
ತಂಡದೊಳು ಚಿಗುರೇಳೆ ಕೊನರ್ತಳಿರ್ತುರುಗಿರಲು |
ಬೆಂಡಾಗೆ ಕಾಮುಕರುತಲೆದೋರಿದುದು ಧರಾ |
ಮಂಡಲದೊಳಚ್ಚಸೊಗಸೊದವೆ ಮಧುಮಾಸವಂಗಜನ ವಿಕ್ರಮವಿಲಾಸ ||೩||

ಅರವಿಂದದೆಸಳ ನಸುಗೆಯ ತಳಿರ ನಿರ್ಮ್ಮಾವಿ |
ನರುಣಪಲ್ಲವಮ ನಿರವಂತಿಯರಲಂ ಕರ್ಪ್ಪುರ |
ವೆರಸಿದುತ್ಪಲಮ ನಿರದೈದುಸರಲಾಗಿ ಪಿಡಿದಿಂಗೋಲ ಪದವಿಲ್ಲನು ||
ಕರತಳದೊಳಾಂತು ರತಿರಾಜನಿದೆಬಂದನೆಂ |
ದಿರದುಲಿವ ಕಹಳಾನಿನಾದಮೆನೆ ಪಂಚಮ |
ಸ್ವರವ ಬೀರುತ್ತಿರ್ದ್ದುವಂದು ಕಲಕಂಠಗಳು ಸಹಕಾರಸಂಕುಲದೊಳು ||೪||

ಮಡುಗಳೊಳು ಗಿಡುಗಳೊಳು ಮರಗಳೊಳು ಬಳ್ಳಿಗಳೊ |
ಳಿಡಿಕಿರಿದ ಮೆಲ್ಲರಲ್ಲೊಡಬೆಯಂ ಮುಸುಕಿದಾ |
ರಡಿಗಡಣ ಪಸರಿಸಿದ ತೆಳ್ಗರಿಗಳಿಂದ್ರಮಣಿತೆತ್ತಿಸಿದ ಪೊಂದೊಡುಗೆಯಂ ||
ಪೊಡವಿಯೆನಿಸುವ ಚೆಲ್ವಮಡದಿ ತೊಟ್ಟಂತಿರಲು |
ಬೆಡಗುವಡೆದಿರ್ದ್ದುದು ವಸಂತಕಾಲ ನಿತಾಂತ |
ಮುಡುಪತಿಯ ಬಿಂಬದೊಳಗಮೃತಕಳೆ ತುಳ್ಕಲು ವಿಯೋಗಿಸಂಕುಳವಳ್ಕಲು ||೫||

ತಿಳಿಗೊಳನೊಳೆಸೆವ ಪೊಂದಾವರೆಯ ಪೊಸಬಿತ್ತು |
ಗಳ ತಿರಿದು ಚಂಚುವಿಂ ಕುಟುಕುಗೊಂಡುವ್ಮುಮಂ |

ದಳಿದು ಸಲ್ಲೀಲೆಯಿಂ ಪೆಣ್ಣಂಚೆ ಯಂಚೆಯಾಗಿದಿರಿನೊಳ್ಗ ತಿದೋರುವ ||
ಕಳಹಂಸರಾಜಿ ಕಾವನ ಪಾಲುವಿಳ್ಳೆಗಳ |
ಬಳಗದಂತಿರೆ ಶೋಭಿಸಿತು ಚೈತ್ರಕಾಲವ |
ಗ್ಗಳಿಸಿ ಪಾರಿವ ಜಕ್ಕವಕ್ಕಿ ತಣ್ಣದಿರ್ವಕ್ಕಿಗಳ ಸುಸಿಲು ಸೊಬಗಾಗಲು ||೬||

ನೇತ್ರತ್ರಯನು ಸಿದ್ಧಶಿವಯೋಗಿರಾಯನಾ |
ಚೈತ್ರವೈಶಾಖವೆಂಬುಭಯಮಾಸದೊಳು ಸುಚ |
ರಿತ್ರೆಯರೊಳುನ್ನತ ಸುಲಕ್ಷಣಾದೇವಿ ಮುಂತಾದ ರಾಣಿಯರು ಬೆರಸಿ ||
ಚಿತ್ರತರ ಕೇಳೀವನಂಗಳೊಳು ಪೊಕ್ಕು ಸ |
ರ್ವತ್ರ ಭೋಗೋಪಭೋಗಂಗಳಿಂ ಸುಖಿಸಿದಂ |
ಧಾತ್ರಿಯೆಲ್ಲಂ ಕೂರ್ತು ಭೋಗಿಯುಂ ಯೋಗಿಯುಂ ತಾನಲ್ಲದಿಲ್ಲೆನುತಿರೆ ||೭||

ಬಳಿವಿಡಿದುದಂದು ಚೆಂಗದಿರುಜ್ವಲಿಪ್ಪೊಂದು |
ಬಳಗಮಂ ರವಿ ಕೆದರೆ ದಾವಾಗ್ನಿ ಸೈವರಿಯೆ |
ಪಳುವದೊಳು ನೀರ್ದಗೆಯೆ ಕೆರೆತೊರೆಗಳರೆತು ಬಾಯ್ವೆರಸಿ ಕಾಡಾನೆಗಡಣಂ ||
ಸುಳಿಯೆ ಬೆಮರ್ವನಿ ಸಕಲಜನರೊಡಲೊಳುಣ್ಮೆ ಕೋ |
ಮಳಲತಾವಳಿ ತೋರಲೊಪ್ಪುವ ನಿದಾಘಮೊಳ್ |
ನೆಳಲನುರೆ ಸಾರ್ದ್ದು ಪಕ್ಕಿಗಳು ಮೈಗರೆಯಲಿಟ್ಟಣಿಸಿ ಬೆಟ್ಟುಗಳೊಡೆಯಲು ||೮||

ಆನಿದಾಘದ ಕಾಲದೊಳು ಸಿದ್ಧಶಿವಯೋಗಿ |
ಮಾನಿನಿಯರೊಡವೆರಸಿ ಬಳಿಕ ಜಲಕೇಳೀವಿ |
ಧಾನಮನೊಡರ್ಚ್ಚಿ ಸುಖದಿಂದಿರಲ್ಕಾ ಪಥದೊಳಲರೇರೆ ಕಾಳ್ಮಲ್ಲಿಗೆ ||
ಪಾನೀಯಕಣಮನಿಚ್ಛಯಿಸಿ ನಭದತ್ತಲು |
ತ್ತಾನಮುಖಮಾಗಿ ಚಾದಗೆಯಿರಲು ಸೋಗೆನವಿ |
ಲಾನಂದದಿಂ ಪಕ್ಕಮಂ ಬಿಚ್ಚಿ ಕುಣಿಯೆ ವರ್ಷಾಗಮಂ ತಲೆದೋರಿತು ||೯||

ನೀಲಾದ್ರಿಕುಳ ವೆರಂಕೆಗಳ ಮಗುಳಾಂತು ಸುರ |
ಪಾಲನಿಹ ದಿವಕೆ ಪಗೆಯಂ ಸಾಧಿಸುವೆವೆಂದು |
ದಾಳಿಡುವ ಪಾಂಗಿದೆಂಬಂತಿರೊಡ್ಡಿದ ಮುಗಿಲುಗಳ ಥಟ್ಟು ಮಬ್ಬುಮಸಗೆ ||
ಸಾಲುವಿಡಿದುಣ್ಮೆ ಕುಡಿಮಿಂಚುಗಳ್ಪೆರ್ಮ್ಮೊಳಗು |
ಕೋಳಾಹಳಂಗೆಯ್ಯೆ ರಾರಾಜಿಸಿತ್ತು ಕಾ |
ರ್ಗ್ಗಲ ಜಲಜಂತುಜಯಬೇಲ ಮುಕ್ತಾಜನನಕಾಲ ಬನಜಾಲಲ್ (?) ||೧೦||

ವೆಳೆಗಾಲವಿಂತೊಪ್ಪುವಾ ವೇಳೆಯಲ್ಲಿ ನಿ |
ರ್ಮ್ಮಳಹರ್ಮ್ಯದೊಳಗಿರ್ದ್ದು ದೇವನಾಸಿದ್ಧಗುರು |

ತಿಳಕಂ ಶರತ್ಕಾಲ ಹಿಮಗಾಲ ಶಿಶಿರಕಾಲಂಗಳೊಳಗುಚಿತವೆನಿಪ ||
ಸಲೆ ಸೊಗಯಿಸುವ ಭೋಗಸೌಖ್ಯಂಗಳಿಂ ತಣಿದು |
ಕಳೆದಿಂತು ಪಲವುಕಾಲಂಗಳಂ ಕುಳ್ಳಿರ್ದು |
ನಿಳಯದೊಳದೊಂದುದಿನ ಜಾನಿಸಿದ ನಮಮ ಶಾಂಭವಮೂರ್ತಿಯಂ ಮನದೊಳು ||

ಸ್ಮರಿಸಲೊಡನಾಕ್ಷಣಂ ಸಾಸಿರದ ನಾನೂರ |
ಬರಿಸವಾಯಿತ್ತಿಂದಿಂಗೆ ನೀಂ ಬರ್ಪುದೆಂದು ಶಂ |
ಕರನು ಸುಜ್ಞಾನಲೋಚನಕೆ ಗೋಚರಿಸಿ ಪೇಳಲು ತೆರೆದು ಕಣ್ಮರೆಲನು ||
ಗುರುವರೇಣ್ಯನು ನೋಡುತಿರ್ದನಿತರೊಳು ರತ್ನ |
ಪರಿರಚಿತ ಕನಕಪುಷ್ಪಕ ವಭ್ರದಿಂದಿಳಿದು |
ಪೊರೆಗೆ ಬಂದುದು ರುದ್ರಕನ್ಯೆಯರ ಮೇಳದಿಂ ಸಕಲಸೌರಂಭದಿಂದೆ ||೧೩||

ಕರಿಯಮಲ್ಲಿಗೆಯಲರ ಮಳೆಸುರಿಯೆ ಕಾರಗಿಲಿ |
ನುರುಧೂಪ ವೆಂಟುದೆಸೆಯಂ ಮುಸುಕೆ ನಾಡೆ ದಿವಿ |
ಜರ ಜಯಜಯಧ್ವಾನವಂಬರವನಾವರಿಸೆ ದೇವದುಂದುಭಿ ಮೊಳಗಲು ||
ಶರತರಂಬಿಡಿದು ನೆಗಪಿದ ಪತಾಕೆಗಳ ಝು |
ಲ್ಲರಿಗಳ ವಿಡಾಯಮಿಗೆ ರುದ್ರಕನ್ಯೆಯರು ಬಂ |
ದೆರಗಿದರು ರೇವಣಾಸಿದ್ಧೇಶ್ವರಂಗೆ ಶಿವತತ್ವಚಕ್ರೇಶ್ವರಂಗೆ ||೧೪||

ರವಿಕುಲದ ಸೋಮವಂಶದ ಧಾರಿಣೀಶ್ವರರ |
ಕುವರಿಯರೆನಿಪ್ಪ ರಾಣಿಯರೆಲ್ಲರಂ ಸದಾ |
ಶಿವಲೋಕದಿಂದಿಳಿದುಬಂದ ಪುಷ್ಪಕದ ಮೇಗಿಟ್ಟದಂ ಬೀಳುಕೊಟ್ಟು ||
ಶಿವಯೋಗಿರಾಯನು ಸಮಸ್ತಶಿಷ್ಯರ ಬರಿಸಿ |
ಶಿವನು ತಮ್ಮೆಡೆಗೆಮ್ಮನವನಿಯಿಂ ಬರವೇಳ್ವೊ |
ಡವಧಿಯು ದಿನಂ ಬಂದುದೆಂದರಿಪಿ ಪೊಳಲಿಂದೆ ಧೀಂಕಿಟ್ಟನೆಲರ್ವಟ್ಟೆಗೆ ||೧೫||

ಗಗನತಳದಲ್ಲಿ ಮಂಗಳವಾಡದಿಂ ತಳರ್ದು |
ಜಗದಾದಿದೇಶಿಕನು ವಹಿಲದಿಂ ವಾರಾಣ |
ಸಿಗೆ ಬಂದು ತನ್ಮಹಾನದಿಯ ತಟದೊಳು ತಪಂಗೈವ ಸನ್ಮುನಿಗಳಿಂದೆ ||
ಮಿಗೆಪೂಜೆ ಗೊಂಡತುಳಶಿವಧರ್ಮಮಂ ಮುನಿಗ |
ಳಿಗೆ ಸಾರ್ಚಿ ನೀವು ನಡೆಯಿಸಿಮೆನಲು ದಿವಿಜನಿ |
ಮ್ನಗೆ ಯಿಲ್ಲಿಗೆಳ್ತಂದ ಕಥನವೇನೆಂದು ಬೆಸೆಗೊಂಡರವರಾಚಾರ್ಯನಂ ||೧೬||

ಧರಣಿಪತಿ ಸಗರ ತೊಂಭತ್ತೊಂಭತುದ್ಧರಾ |
ಧ್ವರವಂ ನಿಮಿರ್ಚಿ ಬಳಿಕಿನ್ನಶ್ವಮೇಧವೆಂ |

ಬುರುತರದ ಯಜ್ಞಮಂ ಮಾಡಿ ದೇವೇಂದ್ರಪದವಿಯ ಪಡೆವೆನೆಂದು ಬಯಸಿ ||
ತುರಗಮಂ ಬಿಟ್ಟು ಶದ್ರಕ್ಷೆಗರುವತ್ತು ಸಾ |
ವಿರಕುಮಾರರ ನಸಂಖ್ಯಾತಸೈನ್ಯಂಗೂಡಿ |
ತೆರಳಿಸಲು ಸಕಲದೇಶಾಧಿಪಾಲಕರಿಂದಲವರು ಕಪ್ಪವ ಕೊಂಡರು ||೧೬||

ಗಾಸಿಗೆಯ್ದಖಿಳನೃಪರಂ ಸಗರಸುತರಿಂತು |
ದೇಶದೇಶಂಗಳೊಳು ಚಾರಿವರಿದಾಡುತಿರ |
ಲಾಸಮಯದೊಳು ತತ್ತುರಂಗಮಂ ಗುಪ್ತವೇಷದಿ ಕಳ್ದುಕೊಂಡುಬಂದು ||
ಭಾಸುರಬಿಲದ್ವಾರಮಂ ಪೊಕ್ಕು ಕಪಿಲಯೋ |
ಗೀಶನಾಶ್ರಮದೊಳದ ಕಟ್ಟಿ ಶಕ್ರಂ ನಿಜನಿ |
ವಾಸಕ್ಕೆ ಪೋದನಿತ್ತಲು ಕಮಾರಕರರಸಿದರು ಜಗತ್ತ್ರಯದೊಳದನು ||೧೭||

ತುರಗವನು ಕಾಣದರಸುತ್ತಲಿನ್ನೆಂತೆಂದು |
ಬರವಸದೆ ಸಗರನಾತ್ಮಜರು ಗುದ್ದಲಿವಿಡಿದು |
ಧರಣಿಯಂ ತೋಡಿ ಕಂಡಗ್ಗದಬಿಲದ್ವಾರದೊಳು ಪೊಕ್ಕು ಕಪಿಲಮುನಿಯ ||
ಪರಮಪಾವನತಪೋವನವ ನಲ್ಲಿರ್ದ್ದ ನಿಜ |
ತುರಗಮಂ ಪಿಡಿದುಕೊಂಡೀತಪಸಿ ತಂದನಿದು |
ನಿರುತವೆಂದೀಶ್ವರಧ್ಯಾನಿಯಾಗಿರ್ದ್ದ ಮುನಿಯಂ ಜಡಿದು ಪೊಡೆದರಿರದೆ ||೧೮||

ಆ ಕಪಿಲಮುನಿಯು ಮಿಟ್ಟನೆ ಮಿಡುಕಿ ಕೋಪದಿಂ |
ದೀಕುಮಾರಕರ ಕಡುಪಿಂ ನೋಡೆ ದಾವಾಗ್ನಿ |
ಯಾಕಾರದಿಂ ನಿಂದ ರೋಷಶಿಖಿಗವರ ದಹಿಸೆಂದು ನೆಟ್ಟನೆ ಬೆಸಸಲು ||
ಕೈಕೊಂಡು ತನ್ನೃಪರ ಮೇಲ್ವರಿದು ಸುಡುತಿರಲ |
ನೇಕಕಾಲದಮೇಲೆ ಜನ್ಮಿಸಿ ಭಗೀರಥ ಮ |
ಹೀಕಾಂತನಾ ಸಗರಪೌತ್ರಜಂ ಬಂದು ಕಪಿಲಂಗೆ ಮಿಗೆ ಬಿನ್ನಯಿಸಿದಂ ||೧೯||

ದೇವಚಿತ್ತಯಿಸೆಮ್ಮ ಪಿತರು ನಿಮ್ಮಯರೋಷ |
ಪಾವಕಂಗೊಳಗಾದರಪ್ರಬುದ್ಧರ ನವರ |
ನೀವೆ ಪಾಲಿಸವೇಳ್ಪುದೆಂದು ಕರುಣಂದೋರೆ ಬಿನ್ನಯಿಸಲಾಗಲಿನ್ನು ||
ದೇವನದಿಯಂ ತಂದು ಹರಿಸಲೊಡನವರೆಲ್ಲ |
ಕೈವಲ್ಯಪದವಿಯಂ ಪಡೆವರೆನೆ ಬಂದು ಗೌ |
ರೀವಲ್ಲಭಂಗುಗ್ರತಪವ ಮಾಡಿದನಾ ಭಗೀರಥ ಮಹೀಪಾಲನು ||೨೦||

ಅವನುಗ್ರತಪಕೆ ಕಡುಮೆಚ್ಚಿ ತನ್ನಯ ಜಟಾ |
ನಿವಹದೊಳು ಮುತ್ತಿನಾಕೃತಿವಡದು ಪತ್ತಿರ್ದ್ದ |

ದಿವಿಜಗಂಗೆಯೊಳೊಂದಿನಿತ ತೆಗೆದು ಕರುಣಿಸಲು ಮೂರುಮುಖವಾಗಿ ಪರಿದು ||
ಅವನಿಯೊಳು ಸಗರಸುತರೆಲ್ಲರಿಗೆ ರುದ್ರಲೋ |
ಕವನಿತ್ತುದೀ ಮಹಾಗಂಗೆಯೆಂದುಸಿರ್ದು ಗಗ |
ನವಸರಿ ಜೆಷ್ಟರಂ ಬಂದು ಪೊಕ್ಕಂ ಹಿಮಾದ್ರಿಯನು ಸಿದ್ಧಾಧೀಶನು ||೨೧||
ಶಿವಗೆ ತಾಯ್ಸನೆ ದಿವ್ಯ ಗಂಗಾಮಹಾನದಿಗೆ |
ತವರೂರು ಸಕಲ ರತ್ನಪ್ರತಾನಕೆ ಜನ್ಮ |
ಭವನ ಎಳೆಯೊಳಗಿರ್ಪ್ಪ ಗಿರಿಗಳೆಲ್ಲಕ್ಕೆ ತಾನಧಿರಾಜನೆಂದೆನಿಸುವ ||
ಪ್ರವಿಮಳಸುತೇಜಮಂ ಪಡೆದು ಕುಳಿರ್ವೆಟ್ಟು ವೈ |
ಭವದಿಂದಲೊಪ್ಪಿದುದು ಗರುಡರಿಂ ಗಾಂಧರ್ವ |
ನಿವಹದಿಂ ಕಿಂಪುರುಷ ಕಿನ್ನರ ಮಯೂರ ವಿದ್ಯಾಧರಕದಂಬದಿಂದೆ ||೨೨||
ಅಲ್ಲಿರ್ದ್ದ ಋಷಿಗಳಿದಿರ್ವಂದು ಬಲವಂದು ಯತಿ |
ವಲ್ಲಭನೆನಿಪ್ಪ ಸಿದ್ಧೇಶ್ವರನ ಪದಪದ್ಮ |
ದಲ್ಲಿ ನೊಸಲಂ ಸಾರ್ಚಿ ಯರ್ಘ್ಯಾಸನಾದಿ ಸತ್ಕಾರವಂ ಪರಿವರ್ತಿಸಿ ||
ಇಲ್ಲಿ ಮಹಿಷಾಕಾರದಿಂ ದಿವ್ಯಲಿಂಗಂ ಸ |
ಮುಲ್ಲಸಿತಮಾಗಿರ್ದ್ದಪುದು ಪೂರ್ವವೃತ್ತಾಂತ |
ವೆಲ್ಲಮಂ ಬೆಸಸಿಮೆನೆ ಪೇಳಲೆಂದಾಚಾರ್ಯಶೇಖರ ಸುಪಕ್ರಮಿಸಿದಂ ||೨೩||
ಕಲಿಬಾದುದೆಂದಕ್ಕಿ ಪಾಂಡುಭೂವರತನುಜ |
ರಿಳೆಯ ಪಾಲಿಸುವ ಸಿರಿಯಂ ಪರೀಕ್ಷಿತನೃಪಗೆ |
ನಲವಿನಿಂ ಕೊಟ್ಟುತ್ತರಾಭಿಮುಖರಾಗಿ ನಡೆತಂದೀ ಮಹೀಧರದೊಳು ||
ಎಳವೆರೆಯ ತಳೆದನಂ ಕಾಣಬೇಕೆಂದೆನುತೆ |
ತೊಳಲಿ ಕಾಂತಾರದೊಳಗರಸುತಿರೆ ಕಾಳ್ಕೋಣ |
ಗಳ ಪಿಂಡಿನೊಳಗೆ ತಾನುಂ ಮಹಿಷವೇಷದಿಂದಿರ್ದ್ದಂ ವಿನೋದದಿಂದೆ ||೨೪||
ಶಿವಶಿವ ಮಹಾದೇವ ನೀನೆಂತುಕಾಣಿಪೆಯೊ |
ನವಗೆನುತೆ ಧರ್ಮಜಂ ಚಿಂತಿಸುತ್ತಿರೆ ನೋಡಿ |
ಪವನಜಂ ಪರಮಮಾಹೇಶ್ವರಂ ತಾನಾದಕಾರಣಂ ಚಿತ್ತದೊಳಗೆ ||
ಶಿವನಿರ್ದ್ದ ನೆಲೆಯನರಿದೊಂದುಬೆಟ್ಟಂಗೆ ಚರ |
ಣವ ನೀಡಿ ಮತ್ತೊಂದುಪರ್ವತದೊಳಿರ್ದ್ದು ಮಹಿ |
ಷವಿತಾನಮಂ ನುಸುಳಿಸುತ್ತಿರಲು ಕೆಲಸಿಡಿದು ಪೋದುದುಲುಲಾಯಮೊಂದು ||೨೫||
ಅದರ ಬೆಂಬಳಿವಿಡಿಯೆ ಪವನಜಂ ಧರಣಿಯೊಳು |
ವದನಮಂ ಮರೆಸಿ ಬೆನ್ನನೆ ಕಾಣಿಸುತ್ತಿರ್ದ್ದ |

ಮದನಹರನಂ ಕಂಡು ಕರೆದಗ್ರಜಾನುಜರನಿಬರಿಂಗೆ ತೋರಿಕೊಟ್ಟು ||
ವಿದಿತಭಯಭಕ್ತಿಯಿಂದಭಿನಮಿಸಿ ಬಟ್ಟೆಯಾ |
ವುದು ದೇವ ಮುಂದೆ ನಮಗೆನೆ ಶಿವಂ ಬಾಲದ |
ಗ್ರದಿನುತ್ತರಾಶೆಯಂ ತೋರಲವರೆಯ್ದಿ ಸನ್ಮುಕ್ತಿಪದಮಂ ಪಡೆದರು ||೨೬||

ಅಂದುಮೊದಲೀ ಮಹಾಲಿಂಗ ಮಹಿವಾಕಾರ |
ದಿಂದೊಪ್ಪುತಿರ್ಪುದೆಂದರಿಹಿ ಬೀಳ್ಕೊಂಡು ನಡೆ |
ತಂದು ಖೇಚರಮಾರ್ಗದೊಳು ಶೋಣಗಿರಿತಾರಪರ್ವತಸುವರ್ಣಾಚಲಂ ||
ಮಂದರಮಹಾದ್ರಿಗೋಕರ್ಣಪಂಚಾರಾಮ |
ವೆಂದೆನಿಸುವಿವುಮುಖ್ಯವಾಗಿಹ ಶಿವಸ್ಥಾನ |
ವೃಂದಮಂ ಪೊಕ್ಕು ನಡೆದಂ ಕೊಲ್ಲಿಪಾಕಿಗೆ ಪಿನಾಕಿಸೋಮೇಶನೆಡೆಗೆ ||೨೭||

ಕನಕಕಳಶಂಗಳೊಳು ಕೀಲಿಸಿದ ಮಾಣಿಕದ |
ತನಿವೆಳಗು ಪರಕಲಿಸಿ ಬಾಂಬಟ್ಟೆಯಲ್ಲಿ ಜಿ |
ಲ್ವನು ತಳೆದ ಮೇಲುಕಟ್ಟಿನ ನೀಳ್ದ ಕೆಂಬಟ್ಟೆಯಂತಿರಲು ಶಿವಸೇವೆಗೆ ||
ಬಿದದಿಂದೈತಪ್ಪ ವನಿತೆಯರ ನೂಪುರ |
ಧ್ವನಿ ದೆಸೆಯ ಪುದಿಯಲೊಪ್ಪಿತು ಕೊಲ್ಲಿಪಾಕಿಯೆಂ |
ದೆನಿಸ ದಿವ್ಯಸ್ಥಾನ ಮೃದುಮೃದಂಗಸ್ವಾನ ನೃತ್ಯಮಾಧುರ್ಯಗಾನ ||೨೮||

ಆ ಸೋಮನಾಥನ ಶಿವಾಲಯಕೆ ಬಂದು ಸಿ |
ದ್ಧೇಶನುದ್ಧೂಳಿಸಿ ವಿಭೂತಿಯನು ಜಪಿಸುತೆ ಮ |
ಹಾಸಪ್ತಕೋಟಿಮಂತ್ರಾಧಿಪತಿಯಾಗಿರ್ಪ ಪರಮಪಂಚಾಕ್ಷರಿಯನು ||
ವಾಸಲಾದಚ್ಚಸುಮ್ಮಾನಿ ವಿಮಳಜ್ಞಾನಿ |
ವೈಶೇಷಿಕಾದಿತರ್ಕಂಗಳಿಗೆ ನಿಲುಕದ ಮ |
ಹೇಶಮೂರ್ತಿಧ್ಯಾನಿ ಪಿಡಿದ ಶಿವಲಿಂಗಮಂ ಪೂಜಿಸಿದನೊಲವೆರಸಿ ||೨೯||

ಕರತಳದೊಳಿಹ ಮಹಾಲಿಂಗಕಭಿನಮಿಸಿ ಶಂ |
ಕರ ಶಾಂತಮಲ್ಲಿಕಾರ್ಜುನ ನಿಮ್ಮ ಬೆಸನನನು |
ಕರಿಸಿ ಭೂತಳದೊಳುದ್ಧರಿಸಿ ಲಿಂಗಾಂಗಮಂ ಸಂತತಂ ನಿಮ್ಮಡಿಯನೆ ||
ಸ್ಮರಿಸಿ ಸದ್ಧರ್ಮದಿಂ ಚರಿಸಿದೆನೆನುತ್ತೆ ವಿ |
ಸ್ತರಿಸಿ ವಿಜ್ಞಾಪನಂಗೈದನಿರದುರವಣಿಸಿ |
ಸುರಿಯಲಾನಂದಾಶ್ರು ಕೊರಲ ನೆರೆ ಬಿಗಿಯೆ ಪುಳಕಂಪೊಣ್ಮೆ ಸಿದ್ಧೇಂದ್ರನು ||೩೦||

ಬಂದ ಬಟ್ಟೆಯೊಳೆಯ್ದಿ ಮುಂದೆ ಬಗೆಗಾಣಬೇ |
ಕೆಂದು ಸಿಕ್ಷ್ಮಯಿಸಿ ನಿರ್ಮಳಸುಧಾವಾರ್ಧಿಯೊಳು |

ಬಂದು ಪುಗುವೆಸೆವ ಪಾಲ್ಗೊವೀಲನಂತೆ ಸೋಮೇಶಶಿವಲಿಂಗದೊಳಗೆ ಪೊಕ್ಕು ||
ಎಂದಿನಂತಿರೆ ರೇಣುಕಪ್ರಮಥವರ್ಯನಾ |
ಗಿಂದುಧರನೋಲಗಿದೊಳೊಪ್ಪುತಿರ್ದ್ದಂ ಚಿದಾ |
ನಂದಮಯ ರೇವಣಾಸಿದ್ಧಶಿವಯೋಗಿ ಶಿವಲಿಂಗಭೋಗೋಪಭೋಗಿ ||೩೧||
ಪರಮಗುರುಶಾಂತಬಾಲೇಶ್ವರಂ ರೇವಣೇ |
ಶ್ವರನ ಲೀಲಾಕಥನಮಂ ಬೆಡಂಗಾಗಿ ಬಿ |
ತ್ತರಿಸೆಂದು ಬೆಸಸಲೊಡನವರ ನೇಮಂಬಿಡಿದು ಮಾಯಣಾರ್ಯನ ಪುತ್ರನು ||
ಸರಸಕವಿಬೊಮ್ಮರಸನತ್ಯಂತಭಕ್ತಿಯಿಂ |
ವಿರಚಿಸಿದನೀ ದಿವ್ಯಕಾವ್ಯಮಂ ರವಿಸುಧಾ |
ಕಿರಣರುಳ್ಳನ್ನ ಮಾಕೃತಿ ವಿರಾಜಿಸುತಿರ್ಪುದೀ ಧರಾಮಂಡಲದೊಳು ||೩೨||
ಲಲಿತಪದಬಂಧವಪ್ರತಿಮಚಿತ್ರಾರ್ಥವ |
ಗ್ಗಳದ ದೇಸಾಳನುಡಿಗಡಣ ವುಗ್ಗಡಜಾಣ್ಮೆ |
ವಿಲಸಿತರಸಂ ಭಾವದೇಳ್ಗೆ ಸಕ್ಕಜದಿಂಪು ಸೊಂಪು ಪೆಂಪಮರ್ದು ಮಿಸುಪ ||
ಬೆಳರ್ವಣ್ಣವಿಡಿದ ಜಸಮಂ ಪಡೆದ ಪೊಸಕಬ್ಬ |
ದೊಳಗಧಿಕಮೆನಿಪ ಸಿದ್ಧೇಶ್ವರಪುರಾಣಾಕೃತಿ |
ಯಿಳೆಜಳಧಿತಾರೆಯುಳ್ಳನ್ನೆಗಂ ವಿಭ್ರಾಜಿಸುತ್ತಿರಲಿ ಸೌಮ್ಯಮಾಗಿ ||೩೩||
ಮಳೆನಿರಂತರವಾಗಿ ಸುರಿಯಲಿ ಧರಿತ್ರಿಯೊಳು |
ಬೆಳೆಸಿರಿ ಸಮಗ್ರವಾಗಲಿ ಸುರಭಿ ಯೆಯ್ದೆ ಕರೆ |
ಯಲಿ ವೀರಶೈವಮತವಭಿವೃದ್ಧಿವಡೆಯಲಿ ಶಿವಾರ್ಚಕಪ್ರಕರದಿಷ್ಟಂ ||
ಫಲಿಸಲಿ ಶಿವಜ್ಞಾನಸೌಖ್ಯ ಪಸರಿಸಲಿ ಮಂ |
ಗಳವಾವಗಂ ಕುಂದದಿರಲಿ ಸಿದ್ಧೇಶ್ವರಂ |
ಸಲಹಲಿ ಸಮಸ್ತ ಶಿವಶರಣರನು ಕರುಣಾಕಟಾಕ್ಷಾವಲೋಕದಿಂದೆ ||೩೪||
ಪೊಳೆವ ಪೋಂಗಂತೆಯ ವಿರಾಜಿಸುವ ವಜ್ರಕುಂ |
ಡಲದಚ್ಚವಿಸುನಿಗೌಪೀನ ಪಳುಕೆಸೆವ ಲಾ |
ಕುಳದ ಕೆಂಜೆಡೆದುರುಬಿನಮಳತ್ರಿಪುಂಡ್ರದುತ್ತಮರತ್ನಮಯಮಕುಟದ ||
ಎಳಮುತ್ತಿನಕ್ಷಮಾಲೆಯ ಕರಸ್ಥಳದೊಳು |
ಜ್ಜ್ವಲಿಪ ಶಿವಲಿಂಗದನುಪಮನೆನಿಪ ನಿತ್ಯಮಂ |
ಗಳಮೂರ್ತಿ ಯಾದಿಸಿದ್ಧಂ ರೇವಣೇಶ್ವರಂ ಪಾಲಿಸುಗೆ ನಿಜಶರಣರಂ ||೩೫||
ರೇವಣಾಸಿದ್ಧೇಶನೆಂಬೀ ಷಡಕ್ಷರವ |
ನಾವನಿಳೆಯೊಳು ಜಪಂಗೆಯ್ದಪ ನವಂಗೆ ಲ |

ಕ್ಷಿತಿವಿಲಾಸಂ ಚಿರಾಯುಷ್ಯ ವಾರೋಗ್ಯಸಂತಾನಾಭಿವೃದ್ಧಿಯಿನಿತು ||
ಆವಗಂ ದೊರೆಕೊಂಬು ದಿದನೋದೆ ಕೇಳ್ದೊಡಂ |
ಪಾವನಮಹಾಕೃತಿಯ ಶಿವತತ್ತ್ವವಿಜ್ಞಾನ |
ವಾವಂಸಿ ಶಾಂತಮಲ್ಲೇಶನೊಲವುಂಟಪ್ಪುದೊಪ್ಪುವೀ ನುಡಿ ತಪ್ಪದು ||೩೬||

ಸಕಲವೇದಾಂತಸಿದ್ಧಾಂತ ಸಂಪನ್ನನ |
ತ್ಯಕುಟಿಲಾತ್ಮಕನೆನಿಪ ಬಾಲಸಿದ್ಧೇಶ್ವರನ |
ಯುಕುತಿ ವಿಡಿದಾರಮ್ಯಮಪ್ಪಂತೆ ಪೇಳ್ದ ಸಿದ್ಧೇಶ್ವರಪುರಾಣದೊಳಗೆ ||
ಮುಕುತಿಯಧಿಪತಿ ರೇವಣೇಶ್ವರಂ ಲಿಂಗದೊಳು |
ಪ್ರಕಟಿತಮೆನಲ್ಪೊಕ್ಕು ರೇಣುಕಪ್ರಮಥನಾ |
ಯಕನಾಗಿ ಮುನ್ನಿನಂತೊಪ್ಪಿರ್ದ್ದ ಕಥನವಿಂತಿದುವೆ ಪದಿಮೂರು ಸಂಧಿ ||೩೭||

ಕರ್ಣಾಟದೊಳು ಸಂಸ್ಕೃತಂ ಬೆರಸು ನಿರ್ಮಳಸು |
ವರ್ಣದಗ್ಗದ ಕುಂಡಲದೊಳೆಡಂಬಡೆದು ಸಂ |
ಪೂರ್ಣಮಾಗಿರ್ದ್ದ ರಂಗಿನ ಪದ್ಮರಾಗದಂತಿರೆ ರಸಜ್ಞಪ್ರಚಯದ ||
ಕರ್ಣಾಭರಣ ಮೆನಿಸೆ ಕಾವ್ಯಮಂ ನಿರ್ಮಿಪರ |
ದಾರ್ನಿನ್ನವೊಲು ಶೈವಭೂದೇವಕುಲತಿಲಕ |
ವರ್ಣಕಕವೀಂದ್ರಚತುರಾಸ್ಯ ಮಾಯಣತನೂಜಾತ ವಿಖ್ಯಾತ ಕುಶಲ ||೩೮||

ಕವಿಸಭಾಮಾಣಿಕ್ಯದೀಪ ಕರ್ಣಾಟದೇ |
ಶವಿಶೇಷಭಾಷಾಪ್ರವೀಣ ಶೈವಾವನೀ |
ದಿವಿಜಾನ್ವಯೋದ್ಧರಣ ಮಾಯಣಾತ್ಮಜ ಕವಿಬ್ರಹ್ಮ ನಿನ್ನಯ ಕೃತಿರಸಂ ||
ಎವರಿವೊಡೆ ಜೇನ್ನೆಯ್ಯ ಹೂರದಂತಮರ್ದುಗಾ |
ಲುವೆಯಂತೆ ರಸದಾಳಿರಸದ ಪೆರ್ಬ್ಬೊನಲಂತೆ |
ಕಿವಿಗುಡಿತೆಯಿಂದೀಂಟಬಲ್ಲ ರಸಿಕರ್ಗ್ಗೆ ಕಡುಸವಿಯನೀವುದು ಧರೆಯೊಳು ||೩೯||

## ೧೩ ನೆಯ ಸಂಧಿಯು ಮುಗಿದುದು.

ಅಂತು ಸಂಧಿ ೧೩ಕ್ಕಂ ಪದನು ೫೭೬೫ ಕ್ಕಂ ಮಂಗಳಂ. ಶ್ರೀ ಶ್ರೀ ಶ್ರೀ

## ರೇವಣಸಿದ್ಧೇಶ್ವರಪುರಾಣಂ ಸಂಪೂರ್ಣಂ.

